ಮುಂಬಯಿ ಇಲಾಖೆಯೊಳಗಿನ ಸರಕಾರೀ ಶಾಲೆಗಳ ಉಪಯೋಗಕ್ಕಾಗಿ
ಮುಂಬಯಿ ವಿದ್ಯಾಖಾತೆ ಡೈರೆಕ್ಟರ್ ದೊರೆಗಳಿಂದ ಮಂಜೂರಾದ

# ದೇಶೀ ಜಮಾಖರ್ಚಿನ ಪದ್ಧತಿ
## (ಕೀರ್ದಿ ಖತಾವಣಿ ಸಹಿತ)

ಕೈ. ವಿರೂಪಾಕ್ಷಪ್ಪ ಚಿನ್ನಪ್ಪ ಹೂಲ
ಇವರು ರಚಿಸಿದರು

ಪ್ರಕಾಶಕರು
ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರಣಿ
ಧಾರವಾಡ





ಬೆಲೆ : ೧—೬—೦

ಮುಂಬಯಿ ಇಲಾಖೆಯೊಳಗಿನ ಸರಕಾರೀ ಶಾಲೆಗಳ ಉಪಯೋಗಕ್ಕಾಗಿ ಮುಂಬಯಿ
ವಿದ್ಯಾ ಖಾತೆಯ ಡಾಯರೆಕ್ಟರ ದೊರೆಗಳಿಂದ ಮಂಜೂರಾಗಿದೆ

# ದೇಶೀ ಜಮಾಖರ್ಚಿನ ಪದ್ಧತಿ

## (ಕೀರ್ದಿ ಖತಾವಣಿ ಸಹಿತ)

**ಕೈ. ವಿರೂಪಾಕ್ಷಪ್ಪ ಚೆನ್ನಪ್ಪ ಹೂಲಿ**
ಪೆನ್ಶನರ ಮಾಸ್ತರ

ಇವರು

ಮುಖ್ಯವಾಗಿ ಕನ್ನಡ ೬ನೆಯ ೭ನೆಯ ಇಯತ್ತೆಗಳಲ್ಲಿ ಅಭ್ಯಾಸ ಮಾಡುವ
ವಿದ್ಯಾರ್ಥಿಗಳಿಗೂ, ಪ್ರಾಯಮರಿ ಸ್ಕೂಲ ಲೀವ್ಹಿಂಗ ಸರ್ಟಿಫಿಕೇಟ ಪರೀಕ್ಷೆಯ ವಿದ್ಯಾರ್ಥಿಗಳಿಗೂ
ಹಾಗೂ ಟ್ರೆನಿಂಗ ಕಾಲೇಜುಗಳ ಪರೀಕ್ಷೆಗೆ ಹೋಗುವ ಉಮೇದವಾರರಿಗೂ
ವ್ಯಾಪಾರಸ್ಥರಿಗೂ ಉಪಯೋಗವಾಗಬೇಕೆಂದು ರಚಿಸಿದರು.

ಪ್ರಕಾಶಕರು :
**ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರಣಿ, ಧಾರವಾಡ**

೧

೧೯೫೧



**ಬೆಲೆ : ೧—೬—೦**

# ವಿಷಯಾನುಕ್ರಮಣಿಕೆ

# ಪ್ರಸ್ತಾವನೆಯು

ಈಗ ನಮ್ಮಲ್ಲಿರುವ ಹಣವೆಷ್ಟು? ಅದರಲ್ಲಿ ವೆಚ್ಚ ಮಾಡಿದ ಹಣವೆಷ್ಟು? ಮಂದಿಯು ಕಡೆಯಿಂದ ನಮಗೆ ಬರತಕ್ಕ, ಮತ್ತು ಮುಂದಿಗೆ ನಾವು ಕೊಡತಕ್ಕ ಹಣವೆಷ್ಟು? ನಾವು ಮಾಡಿದ ವ್ಯವಹಾರದಿಂದ ಆದ ಲಾಭವೆಷ್ಟು, ಹಾನಿಯೆಷ್ಟು? ಎಂಬ ಸಂಗತಿಗಳನ್ನು ನೆನಪಿನಲ್ಲಿಡುವದು ಕಠಿಣವೆನಿಸುವದು. ಅದರಿಂದ ಮೇಲಿನ ಸಂಗತಿಗಳನ್ನು ವೇಳೆವೇಳೆಗೆ ಬರಿದಿಡುವದರಿಂದ ಅನೇಕ ಲಾಭಗಳುಂಟಾಗುವವು. ಪ್ರತಿಯೊಬ್ಬನು ಜಮಾಖರ್ಚು ಬರೆದಿಡುವದು ಅವಶ್ಯವಾದದ್ದೆಂದು ಬೇರೆ ಹೇಳುವ ಕಾರಣವಿಲ್ಲ. ಜಮಾಖರ್ಚು ಬರೆಯುವ ಪದ್ಧತಿಗಳು ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಪ್ರಕಾರದವಿರುವವು. ಈ ಪುಸ್ತಕದಲ್ಲಿ ಈ ದೇಶದಲ್ಲಿ ಬರೆಯುವ ಜಮಾಖರ್ಚಿನ ಪದ್ಧತಿಯನ್ನು ಬರೆದಿರುವದರಿಂದ ಇದಕ್ಕೆ **"ದೇಶೀ ಜಮಾಖರ್ಚಿನ ಪದ್ಧತಿ"** ಎಂಬ ಹೆಸರನ್ನು ಕೊಟ್ಟಿರುವೆವು.

ಈ ಪುಸ್ತಕದ ಹಿಂದಿನ ಆವೃತ್ತಿಯೊಳಗಿನ ಕೆಲವು ಪ್ರಶ್ನೆಗಳಲ್ಲಿ ಕಲಿಸುವವರಿಗೂ, ಕಲಿಯುವವರಿಗೂ ಸುಲಭವಾಗುವಂತೆ ಕೆಲವು ಕಡೆಗೆ ಹೆಚ್ಚುಕಡಿಮೆ ಮಾಡಿರುವೆವು. ಕೆಲವು ಪ್ರಶ್ನೆಗಳ ಕೆಳಗೆ ಉಪಯುಕ್ತವಾದ ಸೂಚನೆಗಳನ್ನು ಕೊಟ್ಟಿರುವೆವು. ಇದಲ್ಲದೆ ಜಮಾಖರ್ಚು ಬರೆಯುವವರು ಅವಶ್ಯವಾಗಿ ಕಲಿಯಬೇಕಾದ ಬಡ್ಡಿಯ ಆಕಾರ ಮಾಡುವ ರೀತಿಯನ್ನೂ ಕಚ್ಚಾ ಕೀರ್ದಿಯ ಮೇಲಿಂದ ಪಕ್ಕಾ ಕೀರ್ದಿಯನ್ನು ತಯಾರ ಮಾಡುವ ರೀತಿಯನ್ನೂ ಬೈಠೀಕೀರ್ದಿಯನ್ನು ಬರೆಯುವ ರೀತಿಯನ್ನು ಕೊಟ್ಟು ಇದನ್ನು ಮುಗಿಸಿರುವೆನು. ಸಾರಾಂಶ ಈ ವಿಷಯ ಜ್ಞಾನವು ವಿಶೇಷವಾಗಬೇಕೆಂದು ಆದಷ್ಟು ಪ್ರಯತ್ನ ಮಾಡಿರುವೆನು. ಇನ್ನು ಇದರಲ್ಲಿ ಏನಾದರೂ ಸುಧಾರಿಸುವ ವಿಷಯಗಳನ್ನು ಸೂಚಿಸಿದಲ್ಲಿ ಅವರ ಸೂಚನೆಯಂತೆ ಮುಂದಿನ ಸಾರೆ ಸುಧಾರಿಸುವೆನು.

ಈ ಪುಸ್ತಕವನ್ನು ಸಾದ್ಯಂತವಾಗಿ ಓದಿ ಯಾವ ಯಾವ ಸ್ಥಳದಲ್ಲಿ ಯಾವ ಯಾವ ಸುಧಾರಣೆಯನ್ನು ಮಾಡಬೇಕೆಂಬುದನ್ನು ಕುರಿತು ನಮಗೆ ಪರಮ ಪೂಜ್ಯರಾದ ರಾ. ಬ. ರಾವಜಿರಾವ ಬಾಳಾಜಿರಾವ ಕರಂದಿಕರ, ಎಜ್ಯುಕೇಶನಲ್ ಇನಸ್ಪೆಕ್ಟರ, ಪ್ರಾಂತ ದಕ್ಷಿಣ ಭಾಗ ಇವರು ಕೊಟ್ಟ ಸೂಚನೆಗಳನ್ನು ಶಿರಸಾವಹಿಸಿ ಅವರ ಅಭಿಪ್ರಾಯದಂತೆ ಇದನ್ನು ಮುದ್ರಿಸಿರುವೆನು.

ತಾ|| ೧೫ನೆಯ ಜೂನ
೧೯೧೧

ಸುಜನ ವಿಧೇಯ,
ಪಿ. ಬಿ. ಹೂಲಿ
ಪೆನ್ಶನರ ಮಾಸ್ತರ

# ಜಮಾಖರ್ಚು ಬರೆಯುವವರು ಲಕ್ಷ್ಯದಲ್ಲಿಡತಕ್ಕ ಸಂಗತಿಗಳು



(೧) ಬಾಯಿಂದಲೇ ಲೆಕ್ಕಗಳನ್ನು ಮಾಡುವ ರೂಢಿಯನ್ನಿಡಬೇಕು.

(೨) ಜಮಾಖರ್ಚಿನೊಳಗಿನ ಅಂಕಿಗಳು ಗಜಿಬಿಜಿಯಾಗದಂತೆ ಸ್ಪಷ್ಟವಾಗಿ ಬರೆಯಬೇಕು.

(೩) ರಕಮುಗಳ ಅಂಕಿಗಳಲ್ಲಿ ಗೊಣ್ಣೆ ಬೀಳಗೊಡಬಾರದು. ಅದರಿಂದ ಗೊಂದಲವಾಗುವದು. ಆಣೆ, ಪೈಗಳನ್ನು ಬರೆಯುವಾಗ ಅಳಿ (॰) ಯನ್ನು ಹಾಕಬೇಕು. ಅಥವಾ ಶೇಖಿಯ ಪದ್ಧತಿಯಂತೆ ಪಾವಲಿ, ಆಣೆ, ಬಿಲ್ಲಿ, ಪೈಗಳನ್ನು ಬರೆಯಬೇಕು.

(೪) ಬೇರೀಜು ವಜಾಬಾಕಿಗಳನ್ನು ಮಾಡುವಾಗ ಮತ್ತೊಂದು ಕಾಗದದಲ್ಲಿ ಮಾಡಿ ಅವುಗಳನ್ನು ಸರಿನೋಡಿಕೊಂಡು ಬರೆಯಬೇಕು.

(೫) ಅಂಕಿಯಲ್ಲಿ ಅಥವಾ ಬರೆಹದಲ್ಲಿ ಏನಾದರೂ ತಪ್ಪಾಗಿದ್ದರೆ, ಅದನ್ನು ಚಾಕುವಿನಿಂದ ಕೆತ್ತಿ ತೆಗೆಯಬಾರದು. ಆ ತಪ್ಪಿನ ಮೇಲೆ ಸಣ್ಣದೊಂದು ಗೆರೆಯನ್ನು ತೆಗೆದು, ಅದರ ಮುಂದೆ ಸಂಕ್ಷಿಪ್ತ ಸಹಿ ಮಾಡಬೇಕು.

(೬) ಜಮಾಖರ್ಚಿನ ಸಂಬಂಧ ಯಾವತ್ತು ಕಾಗದಪತ್ರಗಳನ್ನು ಹರಿಯದೆ ಹಾಗೆ ಎಚ್ಚರದಿಂದ ಇಡಬೇಕು.

(೭) ದಿನಂಪ್ರತಿ ಕೀರ್ದಿ ಬರೆಯುವಾಗ, ಮಿತಿ ಬರೆದು ಅವರ ಮುಂದೆ ತಾರೀಖು ತಿಂಗಳು ಇಸವಿಗಳನ್ನು ಬರೆಯಬೇಕು.

(೮) ಜಮಾಖರ್ಚು ಬರೆಯುವವರು ತಪ್ಪಾಗದಂತೆ ವ್ಯವಸ್ಥೆಯಿಂದ, ವೇಳೆ ವೇಳೆಗೆ ಬರೆಯುತ್ತಿರಬೇಕು.



**ಮುದ್ರಕರು: ಎಸ್. ಜಿ. ಪಾಳೇಕರ, ವಸಂತ ಮುದ್ರಣಾಲಯ, ಧಾರವಾಡ.**
ಪ್ರಕಾಶಕರು: ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರಣಿ, ಧಾರವಾಡ.

# ದೇಶೀ ಜಮಾಖರ್ಚಿನ ಪದ್ಧತಿಯು

# ೧ ನೆಯ ಭಾಗ

## ೧ ನೆಯ ಪ್ರಕರಣ

### ವ್ಯಾಖ್ಯೆಗಳು

(೧) ಮಂದಿಯ ಕಡೆಯಿಂದ ತನಗೆ ರೋಖು, ಅಥವಾ ಬೇರೆ ರೀತಿಯಿಂದ ಬಂದ ಹಣಕ್ಕೆ ಜಮೆ ಅನ್ನುವರು. ಉದಾ:— ಮಂದಿಯ ಕಡೆಯಿಂದ ೧೦ ರೂ. ರೋಖು ಅಥವಾ ೧೦ ರೂ. ಬೆಲೆಯುಳ್ಳ ಜೀನಸು ಬಂದರೆ ಇವೆರಡಕ್ಕೂ **ಜಮೆ** ಅನ್ನುವರು.

(೨) ತಾನು ಮಂದಿಗೆ ರೋಖು ಅಥವಾ ಬೇರೆ ರೀತಿಯಿಂದ ಕೊಟ್ಟ ಹಣಕ್ಕೆ **ಖರ್ಚು** ಅನ್ನುವರು. ಉದಾ:— ೧೦ ರೂ. ರೋಖು ಅಥವಾ ೧೦ ರೂ. ಬೆಲೆಯುಳ್ಳ ಜೀನಸು ಕೊಟ್ಟರೆ ಇವೆರಡಕ್ಕೂ ಖರ್ಚು ಅನ್ನುವರು.

(೩) ಮೊದಲಿಗೆ ನಮ್ಮ ಹತ್ತರಿರುವ ಹಣದಲ್ಲಿ ಈ ಹೊತ್ತಿನ ಜಮೆಯ ರಕಮನ್ನು ಕೂಡಿಸಿ, ಬಂದ ಒಟ್ಟಿನಲ್ಲಿ ಈ ಹೊತ್ತಿನ ಖರ್ಚಿನ ಒಟ್ಟು ರಕಮನ್ನು ಕಳೆಯಲು ಉಳಿಯುವ ಬಾಕಿಗೆ **ರೋಖು ಶಿಲಕು** ಅನ್ನುವರು.

(೪) ದಿನಂಪ್ರತಿ ಜಮಾಖರ್ಚು ಬರೆದ ಬಳಿಕ ಶಿಲುಕು ತೆಗೆದು ಅದನ್ನು ಖರ್ಚಿನ ಕಡೆಗೆ ಬರೆಯುತ್ತಾರೆ. ಅದಕ್ಕೆ **ಅಖೈರ ಶಿಲಕು** ಅಥವಾ "ನಾಳಿನ ಶಿಲಕು" ಅನ್ನುವರು.

(೫) ಯಾವದಾದರೊಂದು ರಕಮು ಯಾತರ ಸಂಬಂಧ ಜಮೆ, ಇಲ್ಲವೆ ಯಾತರ ಸಂಬಂಧ ಖರ್ಚಾಯಿತೆಂಬದನ್ನು ಬರೆಯುವದಕ್ಕೆ **ತಪಶೀಲು** ಅಥವಾ "ವಿವರ" ಅನ್ನುವರು.

(೬) ಕೀರ್ದಿ ಮತ್ತು ಖತಾವಣಿಗಳ ಮುಖಪೃಷ್ಠಗಳ ಮೇಲೆ ಇಲ್ಲವೆ ಬೇಕಾದ ಕಾಗದದ ಆರಂಭದಲ್ಲಿ ಬರೆಯುವ ಮಜಕೂರಿಗೆ **ಮೋಲ್ಖಿಳಾಸ** ಅನ್ನುವರು.

(ಪ್ರ. ೨. ಕ. ೫ ನೋಡಿರಿ.)

(೭) ರೋಖು ಅಥವಾ ಬೇರೆ ರೀತಿಯಿಂದ ಮಾಲು ತೆಗೆದುಕೊಂಡರೆ ಅದಕ್ಕೆ **ಖರೀದಿ** ಅನ್ನುವರು.

(೮) ರೋಖು ಅಥವಾ ಬೇರೆ ರೀತಿಯಿಂದ ಮಾಲು ಮಾರಾಟ ಮಾಡಿದರೆ ಅದಕ್ಕೆ ವಿಕ್ರಿ ಅನ್ನುವರು. ಈ ಪ್ರಕಾರ **ಖರೀದಿ-ವಿಕ್ರಿ**ಗೆ ರೂಢಿಯಲ್ಲಿ* **ವ್ಯವಹಾರ**ವೆನ್ನುವರು. ವ್ಯವಹಾರ (ಕೊಡಕೊಂಬುವದು) ನಡೆದ ದಿವಸಕ್ಕೆ **ಮಿತಿ** ಅನ್ನುವರು.

---

* ನಮ್ಮ ಸಾಂಪತ್ತಿಕ ಸ್ಥಿತಿಯಲ್ಲಿ ಬದಲಾಗುವಂಥ (ಹೆಚ್ಚು ಕಡಿಮೆಯಾಗುವಂಥ) ಕೃತ್ಯಗಳಿಗೆ ವ್ಯವಹಾರವೆನ್ನುವರು. ಅವು ನಾಲ್ಕು ಪ್ರಕಾರದವು (೧) ರೋಖು ಹಣದ ವ್ಯವಹಾರ, (೨) ಪದಾರ್ಥಗಳ (ಅದಲುಬದಲಿನ) ವ್ಯವಹಾರ, (೩) ಮಿಶ್ರ ವ್ಯವಹಾರ, (೪) ಕಬೂಲಿ ಅಥವಾ ಕರಾರಿನ ವ್ಯವಹಾರಗಳು.

(೯) ಇಂಥವನ ಕೈಯಿಂದ, ಹಣ ಇಲ್ಲವೆ ಮಾಲು ಬಂದಿರುವದು, ಅಥವಾ ಇಂಥವನ ಕೈಯಲ್ಲಿ ಹಣ ಇಲ್ಲವೆ ಮಾಲು ಕೊಟ್ಟಿರುವದು, ಎಂಬುದಕ್ಕೆ **ಹಸ್ತೆ** ಅನ್ನುವರು.

(೧೦) ವ್ಯವಹಾರದಲ್ಲಿ ಪ್ರಸಂಗೋಪಾತ ಸಾಕ್ಷಿಯ ದೆಸೆಯಿಂದ ಉಪಯೋಗ ವಾಗಬೇಕೆಂದು, ಒಬ್ಬರ ಸಮಕ್ಷಮ ಮಾಡಿದ ವ್ಯವಹಾರಕ್ಕೆ **ಗುಜಾರತ** ಅನ್ನುವರು.

(೧೧) ಸಾವುಕಾರರು ವ್ಯಾಪಾರಸ್ಥರಿಗೆ ಜೀನಸು ಮಾರಲಿಕ್ಕೆ ಕೊಡುವಾಗ ಇಂತಿಷ್ಟು ಮುದ್ದತಿನಲ್ಲಿ ಮಾರಿದಷ್ಟು ಹಣ, ಉಳಿದಷ್ಟು ಜೀನಸು ತಿರುಗಿ ತಂದು ಕೊಡ ಬೇಕೆಂದು ಮಾಡಿದ ಕರಾರಿಗೆ **ಸಂಜಾಯತ** ಅನ್ನುವರು.

(೧೨) ತಾನು ಕೊಡತಕ್ಕ ಹಣವನ್ನು ಬೇರೊಬ್ಬನು ಕೊಡುವನೆಂದು ತನ್ನ ಸಾವು ಕಾರನ ಅಪೇಕ್ಷೆಯಂತೆ ಖಾತ್ರಿ ಮಾಡಿ ಕೊಡುವದಕ್ಕೆ **ಹವಾಲಿ** (ಹವಾಲೆ) ಕೊಡೋಣ ವೆಂದು ಅನ್ನುವರು.

(೧೩) ಯಾವದೊಂದು ಮಿತಿಯ ಜಮೆಯ ರಕಮು ಎಷ್ಟು? ಖರ್ಚಿನ ರಕಮು ಎಷ್ಟು? ಎಂಬ ಸಂಗತಿಗಳು ತಿಳಿಯುವದಕ್ಕಾಗಿ ತಯಾರು ಮಾಡಿದ ಕಾಗದಕ್ಕೆ **ರೋಜ ಮೇಳ** ಅನ್ನುವರು.

(೧೪) ವ್ಯವಹಾರದ ಅನುಕೂಲಕ್ಕಾಗಿ ಒಬ್ಬನ ಮುಖಾಂತರವಾಗಿ ಮಾಡುವ ವ್ಯವಹಾರಕ್ಕೆ **ಅಡತ** ಅನ್ನುವರು. ಅಡತಿಯ ವ್ಯವಹಾರ ಮಾಡುವವನಿಗೆ **ಅಡತದಾರ** ಅಥವಾ ದಲಾಲನೆಂದು ಅನ್ನುವರು.

(೧೫) (ಅ) ಜೀನಸು ಮಾರುವವರ ಕಡೆಯಿಂದಾಗಲಿ, ಮಾರಲಿಕ್ಕೆ ತೆಗೆದುಕೊ ಳ್ಳುವವರ ಕಡೆಯಿಂದಾಗಲಿ, ಇಲ್ಲವೆ ಇಬ್ಬರ ಕಡೆಯಿಂದಾಗಲಿ ದಲಾಲರು ತಮ್ಮ ಶ್ರಮದ ಬಗ್ಗೆ ತೆಗೆದುಕೊಳ್ಳುವ ಹಣಕ್ಕೆ **ದಲಾಲಿ** ಅಥವಾ **ಕಮಿಶನ್** ಅನ್ನುವರು.

(ಬ) ರೋಖು ಹಣ ಕೊಟ್ಟು ಜೀನಸು ಖರೀದಿ ಮಾಡಿದ ಗಿರಾಕಿಗೆ, ವ್ಯಾಪಾ ರಸ್ಥರು ರೂಪಾಯಿಗೆ ಕೆಲವೊಂದು ಹಣವನ್ನು ಬಿಟ್ಟು ಕೊಡುತ್ತಾರೆ. ಆ ಹಣಕ್ಕೆ **ಸೂಟ** ಅಥವಾ **ಹಿಡತ** ಅನ್ನುವರು.

(ಕ) ಬಹಳ ಬೆಲೆಯ ಜೀನಸಿನ ವ್ಯಾಪಾರ ಮಾಡಿದರೆ, ವ್ಯಾಪಾರಸ್ಥರು ಗಿರಾಕಿಗೆ ಕೆಲವೊಂದು ರಕಮನ್ನು ಬಿಟ್ಟು ಕೊಡುವರು. ಈ ಹಣಕ್ಕೆ **ಕಮಿಶನ್ (ಸೂಟ)** ಅನ್ನುವರು. ಉದಾ:— ೧ ರೂ. ದರದ ೧೦೦ ಪುಸ್ತಕಗಳನ್ನು ಕೊಂಡರೆ (ಕಮಿಶನ್ ದರವು ೧೦೦ಕ್ಕೆ ೧೫ ರಂತೆ ಇದ್ದಾಗ್ಗೆ) ವ್ಯಾಪಾರಸ್ಥರು ಗಿರಾಕಿಯ ಕಡೆಯಿಂದ ೮೫ ರೂ. ರೋಖು ತೆಗೆದುಕೊಂಡು ೧೦೦ ಪುಸ್ತಕಗಳನ್ನು ಕೊಡುವರು.

(ಡ) ಕೆಲವರು ಮೇಲೆ ಹೇಳಿದಂತೆ ರೋಖು ಹಣವನ್ನು ಬಿಟ್ಟುಕೊಡುವದರ ಬದಲು ನೂರು ಜೀನಸುಗಳಿಗೆ ಕೆಲವು ಜೀನಸುಗಳನ್ನು ಹೆಚ್ಚಿಗೆ ಕೊಡುವರು. ಹೆಚ್ಚಿಗೆಕೊಟ್ಟ ಜೀನಸುಗಳಿಗೆ **ವರ್ತಾವಳಿ** ಅನ್ನುವರು. ಉದಾ:— ವರ್ತಾವಳಿಯ ದರವು ೧೦೦ಕ್ಕೆ ೨೦ ರಂತೆ ಇದ್ದಾಗ್ಗೆ ೧ ರೂ. ದರದ ೧೦೦ ಪುಸ್ತಕಗಳನ್ನು ಕೊಂಡರೆ ಅವರು ಗಿರಾಕಿಗೆ ವರ್ತಾವಳಿಯ ೨೦ ಪುಸ್ತಕಗಳು ಸಹಿತವಾಗಿ ೧೨೦ ಪುಸ್ತಕಗಳನ್ನು ಕೊಡುವರು.

(೧೬) ಜಮಾಖರ್ಚು ಬರೆಯುವ ಕಾಗದದಲ್ಲಿ ಎರಡೂ ಬದಿಗೂ (ಎಡಕ್ಕೂ ಬಲಕ್ಕೂ) ಸಮಾನ ಸ್ಥಳವು ಉಳಿಯುವಂತೆ ಮಧ್ಯದಲ್ಲಿ ಬರೆದ ಸಾಲಿಗೆ (ಪಙ್ತಿಗೆ) **ಬೀತವಳಿ** ಅನ್ನುವರು. ಈ ಪ್ರಕರಣದ ಆರಂಭದಲ್ಲಿ ಮೇಲ್ಬದಿಗೆ ಬರೆದ ಮೂರು ಸಾಲುಗಳು, ಮತ್ತು ಕೀರ್ದಿ ನಮೂನೆಯಲ್ಲಿ "ಕಾರ್ತಿಕಮಾಸ ಶಕೆ ೧೮೫೬" ಹಾಗು "ಈ ಹೊತ್ತಿನ ಜಮೆ" "ಈ ಹೊತ್ತಿನ ಖರ್ಚು" ಈ ಶಬ್ದಗಳು ಬೀತವಳಿಗಳಿರುವವು.

(೧೭) ಇಂಥವನಿಗೆ ಇಂತಿಷ್ಟು ಮುದ್ದತ್ತಿನೊಳಗಾಗಿ ಇಂತಿಷ್ಟು ದರದಿಂದ ಇಂತಿಷ್ಟು ಮಾಲು ಕೊಡಬೇಕೆಂದು ಮಾಡಿದ ಕರಾರಿಗೆ **ಜಾಂಗಡಸಾಟೆ** ಅಥವಾ **ಸಟ್ಟಾ** ಅನ್ನುವರು.

(೧೮) ಇಂಥವನಿಗೆ ಇಂತಿಷ್ಟು ಮುದ್ದತಿನೊಳಗಾಗಿ ಇಂತಿಷ್ಟು ರೂಪಾಯಿಗಳನ್ನು ಕೊಡಬೇಕೆಂದು ಒಬ್ಬ ಸಾವುಕಾರನು (ತನ್ನ ಗಿರಾಕಿಯ ಸಲುವಾಗಿ) ಮತ್ತೊಬ್ಬ ಸಾವುಕಾರನಿಗೆ ಕೊಟ್ಟ ಪತ್ರಕ್ಕೆ **ಭಲಾವಣಿ ಪತ್ರ** ಅನ್ನುವರು. (ಭಲಾವಣಿ ಪತ್ರದ ನಮೂನೆಯನ್ನು ೭ನೆಯ ಭಾಗದಲ್ಲಿ ನೋಡಿರಿ.)

(೧೯) ಭಲಾವಣಿ ಪತ್ರವನ್ನು ಬರಕೊಟ್ಟ ಬಗ್ಗೆ ಸಾವುಕಾರನು ಸಾಲಗಾರನಿಂದ (ಗಿರಾಕಿಯಿಂದ) ೧೦೦ ಕ್ಕೆ ಕೆಲವು ಹಣವನ್ನು ಮುಂಗಡ ಇಸಗೊಳ್ಳುವನು. ಆ ಹಣಕ್ಕೆ **ಮನೋತಿ** ಅನ್ನುವರು. (ಮನೋತಿ ದರವು ಸಾಧಾರಣವಾಗಿ ೧೦೦ಕ್ಕೆ ೨ ಆಣೆಗಳಿಂದ ೪ ಆಣೆಗಳ ವರೆಗೆ ಇರುವದು.)

(೨೦) ವರ್ತಕರು ವ್ಯವಹಾರದಲ್ಲಿ ಉಪಯೋಗಿಸುವ ಕೆಲವು ಶಬ್ದಗಳ ವಿವರಣೆಯು:— (೧) ಮನುಷ್ಯನಿಗೆ **ಇಸಮು, ಆಸಾಮಿ** ಅಥವಾ **ಕುಳ** ಎಂದೂ, ಮನುಷ್ಯನ ಹೊರತು ಉಳಿದವುಗಳಿಗೆ **ಬಾಬು** ಎಂದೂ ಅನ್ನುವರು (೨) ಅಂಗಡಿಯ ವ್ಯವಹಾರವು ಯಾರ ನಾವೆಯಿಂದ ನಡೆದಿರುವದೋ ಅವನಿಗೆ **ಮಾಲೀಕನೆನ್ನುವರು,** (೩) **ವಹಿವಾಟದಾರ:—** ಮಾಲೀಕನ ಅಂಗಡಿಯ ವ್ಯವಹಾರವನ್ನು ಸ್ವಂತ ಜವಾಬದಾರಿಯಿಂದ ನಡೆಯಿಸುವವನಿಗೆ **ವಹಿವಾಟದಾರನೆನ್ನುವರು.** (೪) **ಧನಕೋ**=ಸಾವುಕಾರ (೫) **ಋಣಕೋ**=ಸಾಲಗಾರ, **ರೋಖು** (ನಗದ)=ಪ್ರತ್ಯಕ್ಷ ಹಣ. (೭) **ರಕಮು**=ಹಣದ ಅಂಕಿ, (೮) **ಲಂಗ**=ಸದರಿಗೆ ಬರೆಯತಕ್ಕ ರಕಮು ಇಲ್ಲದಿದ್ದರೆ (೦) ಶೂನ್ಯ ಬರೆಯುವದು. (೯) **ವಹಿ**=ಪುಸ್ತಕ (೧೦) **ಮಾಮೂಲ**=ಮುಂಚಿನ ಅಥವಾ ವಹಿವಾಟಿಯು. (೧೧) **ಬಂದ**=ಬಿಡಿ ಕಾಗದ. (೧೨) **ಆಮದು**=ಹೊರಗಿನಿಂದ ಬರುವ ಸರಕು ಅಥವಾ ಖರೀದಿ ಮಾಡಿದ ಸರಕು (೧೩) **ರಪ್ತು**=ಹೊರಗೆ ಹೋಗುವ ಸರಕು ಅಥವಾ ವಿಕರಿ ಮಾಡಿದ ಸರಕು (೧೪) **ಮೇಳ**=ಸರಿ (ಬರೋಬರಿ) (೧೫) **ಗೋಷವಾರೆ**=ತಪಶೀಲು (೧೬) **ಮೊಕಾಬಿಲಿ**=ತಾಳೇ ನೋಡುವದು. (೧೭) **ಜವಳಿ**=ಸೀರಿ ಧೋತರ ಮುಂತಾದ ಸನಗುಗಳು. (೧೮) **ರುಜವಾತು ಆಗು**=ಆಸಾಮಿಯ ಲೆಕ್ಕಕ್ಕೆ ತಮ್ಮ ಲೆಕ್ಕವನ್ನು ಸರಿ ಹಚ್ಚಿ ನೋಡು, ಇಲ್ಲವೆ ಸಮಕ್ಷಮ ಭೆಟ್ಟಿಯಾಗು. (೧೯) **ನೊಂದುಮಾಡು**= ಬರೆದಿಡತಕ್ಕ ಸಂಗತಿಗಳನ್ನು ಬರೆದಿಡು. (೨೦) **ಕೈಗಡ**=ಬಡ್ಡಿಯ ಕರಾರ ಇಲ್ಲದ ಹಣ ಕೊಡೋಣ. (೨೧) **ಸಾಲ**=ಬಡ್ಡಿಯ ಕರಾರಿನಿಂದ ಹಣ ಕೊಡೋಣ.

# ೨ನೆಯ ಪ್ರಕರಣ

## ಜಮಾ ಖರ್ಚಿನ ವಹಿಗಳು*

(೧) ಜಮಾ ಖರ್ಚು ಬರೆಯುವ ವಹಿಗಳು ಮುಖ್ಯವಾಗಿ ಎರಡು, ಒಂದು **ಕಿರ್ದಿ** ಇನ್ನೊಂದು **ಖತಾವಣಿ.**

ಸೂಚನೆ:— ಜಮಾಖರ್ಚಿನ ವಹಿ ಕಟ್ಟುವ ಕಾಗದಗಳನ್ನು ಅವುಗಳ ಅಗಲಳತೆಯಲ್ಲಿ ಸರಿಯಾದ ಎಂಟು ಭಾಗಗಳಾಗುವಂತೆ ಚನ್ನಾಗಿ ಮಡಿಕೆಗಳನ್ನು ಹಾಕಿ, ಬಳಿಕ ತಮಗೆ ಹತ್ತುವಷ್ಟು ಕಾಗದಗಳನ್ನು ತೆಗೆದುಕೊಂಡು, ಅವುಗಳಮೇಲೆ ದಪ್ಪಾದ ಅರಿವೆಯ ರಟ್ಟುಗಳನ್ನಾಗಲಿ, ತೊಗಲಿನ ರಟ್ಟುಗಳನ್ನಾಗಲಿ ಹಾಕಿ, ವಹಿಗಳನ್ನು ಕಟ್ಟುವರು. ಬಳಿಕ ಪಾನುಗಳಿಗೆ ಕ್ರಮವಾಗಿ ಅಂಕಿಗಳನ್ನು ಹಾಕಿಡುವರು.

## ವಹಿಗಳನ್ನು ಕಟ್ಟುವ ಕಾಗದಗಳ ನಮೂನೆಯು.

ಕಾಗದದ ಅಗಲಳತೆ

ಅ ಬ

ಕ ಡ

ಈ ಕಾಗದದಲ್ಲಿ ಸರಿಯಾಗಿ ಎಂಟು ಭಾಗಗಳಾಗುವಂತೆ ಮಡಿಚಿದ ಮಡಿಕೆಯ ಗುರ್ತುಗಳನ್ನು ಉದ್ದ ಗೆರೆಯಿಂದ ತೋರಿಸಿದೆ.

(೨) ಜಮಾ ಖರ್ಚು ಬರೆಯುವ ವಹಿಗಳ ಕಾಗದದ ಎಡಗಡೆಯ ಅರ್ಧ ಭಾಗದಲ್ಲಿ ಜಮೆ ಮತ್ತು ಬಲಗಡೆಯ ಅರ್ಧ ಭಾಗದಲ್ಲಿ ಖರ್ಚು ಬರೆಯುವರು. ಜಮೆಯ ಕಡೆಯ ಭಾಗಕ್ಕೆ **ಜಮೆಯ ಸದರು**ಗಳೆಂದೂ ಖರ್ಚಿನ ಕಡೆಯ ಭಾಗಕ್ಕೆ **ಖರ್ಚಿನ ಸದರು**ಗಳೆಂದೂ ಅನ್ನುವರು.

| ಜಮೆ | ಯ | ಸದರು- | ಗಳು. | ಖರ್ಚಿ- | ನ | ಸದರು- | ಗಳು. |
|---|---|---|---|---|---|---|---|

* ವಹಿಗಳು:— ರೋಜಕೀರ್ದಿ, ಖತಾವಣಿ, ಜೈಮೀಕೀರ್ದಿ, ಕಚ್ಚಾಕೀರ್ದಿ, ರೋಖಡಿ (ನಗದಿ ಬುಕ್ಕು) ಮಾಲಿನವಹಿ (ವಖಾರ ಬುಕ್ಕು) ಪಠಾಣವಹಿ, ಚೋಟಖಾತೆ, ಚಾಂಗಡವಹಿ, (ದಾಖವಣಿ ಬುಕ್ಕು) ಮುಂತಾದವು.

(೩) ಜಮಾಖರ್ಚಿನ ವಹಿಗಳ ಪಾನುಗಳಲ್ಲಿರುವ ಪ್ರತಿಯೊಂದು ಮಡಿಕೆಗೆ **ರಕಾನೆ** ಅನ್ನುವರು. ಅವುಗಳಲ್ಲಿ ಜಮೆಯ ಸದರಿನಲ್ಲಿ ನಾಲ್ಕು. ಖರ್ಚಿನ ಸದರಿನಲ್ಲಿ ನಾಲ್ಕು ರಕಾನೆಗಳಿರುವವು. ಜಮೆಯ ಹಾಗು ಖರ್ಚಿನ ಮೊದಲಿನ ರಕಾನೆಗಳಿಗೆ ಸದರು ಇಲ್ಲವೆ **ಹಣದ ರಕಾನೆ**ಗಳೆಂತಲೂ, ಉಳಿದ ಮೂರು ರಕಾನೆಗಳಿಗೆ ತಪಶೀಲಿನ ರಕಾನೆಗಳೆಂತಲೂ ಅನ್ನುವರು.

| ೧ | ೨ | ೩ | ೪ | ೧ | ೨ | ೩ | ೪ |
|---|---|---|---|---|---|---|---|
| ಹಣದ ರಕಾನೆ (ಜಮೆಯ) | ಜ | ಮೆ | ಯ | ಹಣದ ರಕಾನೆ (ಖರ್ಚಿನ) | ಖ | ರ್ಚಿ | ನ |
| | ತಪಶೀ | ಲಿನ ರಕಾ | ನೆಗಳು | | ತಪಶೀ | ಲಿನ ರಕಾ | ನೆಗಳು |

(೪) ಯಾವದೊಂದು ದಿವಸ ನಡೆದ ವ್ಯವಹಾರದ ಜಮಾಖರ್ಚನ್ನು ಬರೆಯುವ ಬಗ್ಗೆ ಕೀರ್ದಿಯಲ್ಲಿ ಮಿತಿಯನ್ನು ಬರಕೊಂಡ ಬಳಿಕ ಅದರ ಕೆಳಗೆ ಜಮೆ ಮತ್ತು ಖರ್ಚುಗಳ ಹಣದ ರಕಾನೆಗಳಲ್ಲಿ ಅನುಕ್ರಮವಾಗಿ ಜಮೆ ಹಾಗು ಖರ್ಚು ಎಂಬ ಶಬ್ದಗಳನ್ನು ಬರೆದು ಅವುಗಳ ಮುಂದೆ ತಪಶೀಲಿನ ಮೊದಲಿನ ಎರಡು ರಕಾನೆಗಳಲ್ಲಿ ಅಡ್ಡ ಗೆರೆಗಳನ್ನು ಕೊರೆದು, ಅವುಗಳ ಮುಂದೆ (ಕಡೆಯ ರಕಾನೆಗಳಲ್ಲಿ) ರೂಪಾಯಿ ಎಂದು ಬರೆಯುವರು. ಮತ್ತು ಜಮೆಯ ಹಣದ ರಕಾನೆಯಲ್ಲಿ ಶಿಲಕಿನ ರಕಮನ್ನು ಬರೆದು ಅದರ ಮುಂದೆ (ತಪಶೀಲಿನ ರಕಾನೆಗಳಲ್ಲಿ) ನಿನ್ನಿನ ಶಿಲಕು ಎಂದು ಬರೆದು, ಅದರ ಕೆಳಗೆ ಜೋಡು ಗೆರೆಗಳನ್ನೆಳೆಯುವರು. ಈ ಬರಹಕ್ಕೆ **ಮಿತಿ ಕಟ್ಟೋಣ**ವೆಂದು ಅನ್ನುವರು. ಉದಾ:—

ರೋಜ ಕೀರ್ದಿ ಪೌಷ್ಯ ಶು. ೧ ಗುರುವಾರ ಶಕೆ ೧೮೩೬ ಆನಂದನಾಮ ಸಂವತ್ಸರ ತಾರೀಖು ೧೮—೧೨—೧೯೧೪.

| ಜಮಾ | | ರೂಪಾಯಿ | ಖರ್ಚು | | ರೂಪಾಯಿ |
|---|---|---|---|---|---|
| ೧೧೮೬ | ನಿನ್ನಿನ ಶಿಲಕು | | | | |

ಸೂಚನೆ:— (೧) ಕೆಲವರು ಕೀರ್ದಿ ಖತಾವಣೆಗಳ ತಪಶೀಲಿನ ಕಡೆಯ ರಕಾನೆಗಳಲ್ಲಿ ರೂಪಾಯಿ ಎಂದು ಬರೆಯುವದಿಲ್ಲ. ಅಲ್ಲಿಯೂ ಗೆರೆಯನ್ನೆಳೆಯುವರು. (೨) ಕೆಲವರು ಕೀರ್ದಿ ಖತಾವಣೆಗಳ ಜಮೆ ಹಾಗು ಖರ್ಚಿನ ಹಣದ ರಕಾನೆಗಳಲ್ಲಿ ಅನುಕ್ರಮವಾಗಿ ರೂ. ಜಮಾ ಹಾಗು ರೂ. ಖರ್ಚು ಎಂದು ಬರೆದು, ತಪಶೀಲಿನ ಎಲ್ಲ ರಕಾನೆಗಳಲ್ಲಿ ಗೆರೆಯನ್ನೆಳೆ

## (೫) ಕೀರ್ದಿ, ಖತಾವಣಿಗಳ ಮೇಲ್ವಿಳಾಸಗಳು

(ಅ) ಮಾಲೀಕನು ಅಂಗಡಿಯ ವ್ಯವಹಾರವನ್ನು ಸ್ವತಃ ಸಾಗಿಸುತ್ತಿದ್ದರೆ, ಅವನ ಹೆಸರಿನ ಹಿಂದೆ ಸ್ವಂತ ಅಥವಾ ಖಾಸಗತವೆಂಬ ಶಬ್ದವನ್ನು ಬರೆದು ಬಳಿಕ ಅವನ ಹೆಸರಿನ ಮುಂದೆ ಮಿತಿ ಮುಂತಾದವುಗಳನ್ನು ಬರೆಯುವರು. ಉದಾ:—

ಶ್ರೀ

ರೋಜಕೀರ್ದಿ, **ಖಾಸಗತ** ವೀರಪ್ಪ ಶಂಕರಪ್ಪ ಅಂಗಡಿ,
ಸಾ|| ಹುಬ್ಬಳ್ಳಿ ತಾ|| ಹುಬ್ಬಳ್ಳಿ ಜಿ|| ಧಾರವಾಡ.
ಇವರ ಅಂಗಡಿಯದು.
ಮಿತಿ ಕಾರ್ತಿಕ ಶು. ೧ ಶಕೆ. ೧೮೩೭ ಆನಂದನಾಮ ಸಂವತ್ಸರದಿಂದ
ಶಕೆ. ೧೮೩೭ ರಾಕ್ಷಸನಾಮ ಸಂವತ್ಸರ ಆಶ್ವೀಜ ಬ|| ೩೦ ವರೆಗೆ
ಒಂದು ವರ್ಷದ ಮಟ್ಟಿಗೆ

---

(ಬ) ಮಾಲೀಕ ಮತ್ತು ವಹಿವಾಟದಾರ ಇವರು ಬೇರೆಬೇರೆ ಇದ್ದರೆ, ಮೇಲ್ವಿಳಾಸದಲ್ಲಿ ವಹಿವಾಟದಾರನ ಹೆಸರಿನ ಹಿಂದೆ **ವಿದ್ಯಮಾನ** ಎಂಬ ಶಬ್ದವನ್ನು ಉಪಯೋಗಿಸುವರು. ಉದಾ:—

ಶ್ರೀ

### ರೋಜ ಕೀರ್ದಿ

ರಾಜ ಶ್ರೀ ವೀರಪ್ಪಾ ಅಂಗಡಿ, **ವಿದ್ಯಮಾನ** ರಾ|| ಶಂಕರಪ್ಪಾ ಅಂಗಡಿ
ಸಾ|| ಹುಬ್ಬಳ್ಳಿ ತಾ|| ಹುಬ್ಬಳ್ಳಿ ಜಿಲ್ಲಾ ಧಾರವಾಡ.
ಇವರ ಅಂಗಡಿಯದು.
ಮಿತಿ, ಕಾರ್ತಿಕ ಶು. ೧ ಶಕೆ ೧೮೩೭ ಆನಂದನಾಮ ಸಂವತ್ಸರದಿಂದ
ಶಕೆ ೧೮೩೭ ರಾಕ್ಷಸನಾಮ ಸಂವತ್ಸರ ಆಶ್ವೀಜ ಬ|| ೩೦ ವರೆಗೆ
ಒಂದು ವರ್ಷದ ಮಟ್ಟಿಗೆ

**ಸೂಚನೆ:**— (೧) ಕೀರ್ದಿ, ಖತಾವಣಿಗಳಲ್ಲಿ ಮೇಲ್ವಿಳಾಸಗಳನ್ನು ಬರೆಯುವಾಗ ಅವುಗಳ ಮೊದಲನೆಯ ಪುಟದ ೧ನೆಯ ೮ನೆಯ ರಕಾನೆಗಳನ್ನು ತೆರವಿಟ್ಟು ಮಧ್ಯದಲ್ಲಿ (ಬೀತವಳಿಗಳನ್ನು) ಬರೆಯುವರು.

(೨) ಕೀರ್ದಿಯ ಹೊರತು ಬೇರೆ ವಹಿಗಳಲ್ಲಿ ಮೇಲ್ವಿಳಾಸವನ್ನು ಬರೆಯುವಾಗ ಈ ನಮೂನೆಯಲ್ಲಿ ರೋಜ ಕೀರ್ದಿ ಎಂದು ಬರೆದಿರುವ ಸ್ಥಳದಲ್ಲಿ "ಜೈರಿ ಕೀರ್ದಿ", "ಕಚ್ಚಾ ಕೀರ್ದಿ" "ಖತಾವಣಿ" ಮುಂತಾದ ಶಬ್ದಗಳಲ್ಲಿ ಅವಶ್ಯವಿರುವ ಶಬ್ದಗಳನ್ನು ಬರೆಯುವರು. "ಅಂಗಡಿ" ಎಂದು ಬರೆದಿರುವ ಸ್ಥಳದಲ್ಲಿ ತಮಗೆ ಅವಶ್ಯವಿದ್ದ ಹಾಗೆ "ಕಿರಾಣಿ ಅಂಗಡಿ" "ದಲಾಲಿ ಅಥವಾ ಅಡತಿ ಅಂಗಡಿ", "ಮನೆಯ ಖರ್ಚಿನ" ಬಾಬತು ಎಂಬ ಶಬ್ದಗಳನ್ನು ಬರೆಯುವರು.

# (೬) ಹೊಸ ಕೀರ್ದಿಯನ್ನು ಆರಂಭ ಮಾಡುವ ಹಾಗು ಮುಗಿಸುವ ದಿವಸಗಳು

(೧) ಎಲ್ಲ ವ್ಯವಹಾರಸ್ಥರು ಕಾರ್ತಿಕ ಶುದ್ಧ ೧ಕ್ಕೆ (ಸರಸ್ವತೀ ಪೂಜೆಯ ದಿವಸ) ಆರಂಭ ಮಾಡಿ, ಆಶ್ವೀಜ ಬಹುಳ ೩೦ಕ್ಕೆ (ಲಕ್ಷ್ಮೀ ಪೂಜೆಯ ದಿವಸ) ಮುಗಿಸುವರು.

(೨) ಹೊಲ ಮನೆಯ ಉದ್ಯೋಗ ಮಾಡುವವರು ಚೈತ್ರ ಶುದ್ಧ ೧ ಕ್ಕೆ (ಯುಗಾದಿಗೆ) ಆರಂಭ ಮಾಡಿ, ಫಾಲ್ಗುಣ ಬಹುಳ ೩೦ಕ್ಕೆ ಮುಗಿಸುವರು.

(೩) ಸಾಧಾರಣವಾಗಿ ಸರಕಾರಿ ಲೆಕ್ಕವನ್ನು, ಎಪ್ರೇಲ ೧ನೆಯ ತಾರೀಖಿಗೆ ಆರಂಭಮಾಡಿ, ಮಾರ್ಚ ೩೧ನೆಯ ತಾರೀಖಿಗೆ ಮುಗಿಸುವರು.

(೪) ಡಾಯರಿಯಲ್ಲಿ ಲೆಕ್ಕ ಬರೆಯುವವರು, ಹಾಗು ಪೋಲೀಸ ದಪ್ತರಿನ ಲೆಕ್ಕವನ್ನು ಜನೆವರಿ ೧ನೆಯ ತಾರೀಖಿಗೆ ಆರಂಭಿಸಿ, ಡಿಸೆಂಬರ ೩೧ನೆಯ ತಾರೀಖಿಗೆ ಮುಗಿಸುವರು.

(೫) ಗ್ರಾಮದ ಮುಲ್ಕೀ ಲೆಕ್ಕವನ್ನು, ಆಗಸ್ಟ ೧ನೆಯ ತಾರೀಖಿಗೆ ಆರಂಭಮಾಡಿ, ಜುಲಾಯಿ ೩೧ ನೆಯ ತಾರೀಖಿಗೆ ಮುಗಿಸುವರು.

---

# ೩ ನೆಯ ಪ್ರಕರಣ

## ಕೀರ್ದಿಯನ್ನು ಕುರಿತು

(೧) **ಕೀರ್ದಿ:—** ತಪಶೀಲವಾರ ಜಮಾಖರ್ಚು ಬರೆದು ಶಿಲಕು ತೆಗೆಯುವ ವಹಿಗೆ **ಕೀರ್ದಿ**ಯೆನ್ನುವರು.

(೨) ಕೀರ್ದಿಯಲ್ಲಿ ಮುಖ್ಯವಾಗಿ **ರೋಜ ಕೀರ್ದಿ, ಬೈಠೀ ಕೀರ್ದಿ** ಎಂದು ಎರಡು ಪ್ರಕಾರಗಳು.

(೩) **ರೋಜ ಕೀರ್ದಿ:—** ತಪಶೀಲವಾರ ಜಮಾ ಖರ್ಚು ಬರೆದು ದಿನಂಪ್ರತಿ ಶಿಲಕು ತೆಗೆಯುವ ವಹಿಗೆ **ರೋಜ ಕೀರ್ದಿ** (ಪಕ್ಕಾ ಕೀರ್ದಿ) ಯೆನ್ನುವರು.

ಸೂಚನೆ:— ವ್ಯವಹಾರ ನಡೆದ ಕೂಡಲೆ ರೋಜಕೀರ್ದಿಯನ್ನು ಬರೆಯದೆ ನೆನಪಿಸಾಗಿ ಒಂದು ಹಿತ್ತಾಳಿಯ ತಗಡಿನ ಮೇಲಾಗಲಿ, ಅಥವಾ ಕರಿಯ ಹಲಿಗೆಯ ಮೇಲಾಗಲಿ ಇಲ್ಲವೆ ಒಂದು ವಹಿ*ಯಲ್ಲಾಗಲಿ ಲೆಕ್ಕವನ್ನು ಬರೆದಿಡುವರು.

(೪) **ಕಚ್ಚಾ* ಕೀರ್ದಿ:—** ವ್ಯವಹಾರ ನಡೆದ ಹಾಗೆ ತಪಶೀಲವಾರ ಜಮಾ ಖರ್ಚು ಬರೆದು, ಶಿಲಕು ತೆಗೆಯುವ ವಹಿಗೆ **ರೋಜ ಖರ್ಡ** ಇಲ್ಲವೆ **ಕಚ್ಚಾ ಕೀರ್ದಿ** ಯೆನ್ನುವರು. (ರೋಜಖರ್ಡಿನ ನಮೂನೆಯನ್ನು ೨ ನೆಯ ಭಾಗದಲ್ಲಿ ನೋಡಿರಿ.)

*ಸೂಚನೆ:— (೧) ಒಂದೇ ದಿವಸದಲ್ಲಿ ಒಂದು ಇಸಮಿನ ಇಲ್ಲವೆ ಬಾಬಿನ ಸಂಬಂಧದಿಂದ ನಡೆದ ವ್ಯವಹಾರದ ರಕಮುಗಳನ್ನು ಅವುಗಳ ತಪಶೀಲಿನೊಂದಿಗೆ ಅವಶ್ಯವಿದ್ದಷ್ಟು ಸಾರೆ ಕಚ್ಚಾ ಕೀರ್ದಿಯಲ್ಲಿ ಜಮೆಯ ಕಡೆಗೂ, ಖರ್ಚಿನ ಕಡೆಗೂ ಬರೆಯುವರು. ಉದಾ:— (ಅ) ಆಸಿಗೆ ಮುಂಜಾನೆ ೧೦ ರೂ. ಕೊಟ್ಟರೆ, ಕೂಡಲೆ ಆ ರಕಮನ್ನು ಖರ್ಚಿನ ಕಡೆಗೆ ಬರೆಯುವರು. ಆ ರಕಮು ಸಾಯಂಕಾಲಕ್ಕೆ ಅವನಿಂದ ತಿರುಗಿ ಬಂದರೆ ಅದನ್ನು ಜಮೆ ಹಿಡಿಯುವರು. ರೋಜ ಕೀರ್ದಿಯನ್ನು (ಪಕ್ಕಾ ಕೀರ್ದಿಯನ್ನು) ಬರೆಯುವಾಗ ಅವೆರಡೂ ರಕಮುಗಳ ಅವಶ್ಯಕತೆ ಇರುವದಿಲ್ಲ; ಆದ್ದರಿಂದ ಕಚ್ಚಾ ಕೀರ್ದಿಯಲ್ಲಿ ಅವನ್ನು ಕಾಟು ಹೊಡೆಯುವರು. (ಬ) ಆಸಿಗೆ ಮುಂಜಾನೆ ೧೦ ರೂ. ಸಾಯಂಕಾಲಕ್ಕೆ ೧೫ ರೂ. ಗಳನ್ನು ಕೊಟ್ಟರೆ ಅವೆರಡೂ ರಕಮುಗಳನ್ನು ರೋಜಖರ್ಡಿನಲ್ಲಿ ಬೇರೆ ಬೇರೆ ಖರ್ಚು ಬರೆಯುವರು. ರೋಜ ಕೀರ್ದಿಯನ್ನು ಬರೆಯುವಾಗ ಅವೆರಡೂ ರಕಮುಗಳನ್ನು ಒಟ್ಟುಗೂಡಿಸಿ ೨೫ ರೂ. ಗಳನ್ನು ಖರ್ಚು ಬರೆಯುವರು.

ಸೂಚನೆ:— (೨) ಕಚ್ಚಾ ಕೀರ್ದಿಯ ಬರಹದಲ್ಲಿ ಏನಾದರೂ ತಪ್ಪಾದರೆ ಅದನ್ನು ಕಾಟು ಹಾಕಿ, ದುರಸ್ತ ಮಾಡುವರು. ಮತ್ತು ಮೇಲಿನ ಸೂಚನೆಯ (ಅ) ಕಲಮಿನಲ್ಲಿ ಹೇಳಿದಂತೆ ಅನವಶ್ಯ ರಕಮುಗಳ ಹಿಂದೆ × ಕಾಟು ಹೊಡೆಯುವರು. ಕಚ್ಚಾ ಕೀರ್ದಿಯ ರಕಮನ್ನು ಪಕ್ಕಾ ಕೀರ್ದಿಗೆ ಏರಿಸಿದ ಬಗ್ಗೆ ಪ್ರತಿಯೊಂದು ರಕಮಿನ ಹಿಂದೆ | ಹೀಗೆ ಗೆರೆಯನ್ನು ಹೊಡೆಯುವರು. (ಈ ವಹಿಗೆ ಕೆಲವರು ಕಚ್ಚಾಮೇಳ ಎಂದು ಅನ್ನುವರು.)

(೫) **ಕೀರ್ದಿಯ ಮುಖ್ಯ ಉಪಯೋಗಗಳು:—** ಕೀರ್ದಿಯ ಮೇಲಿಂದ ಈಗ ನಮ್ಮಲ್ಲಿರತಕ್ಕ ಶಿಲಕು ಎಷ್ಟು? ದಿನದ ಜಮೆ ಎಷ್ಟು? ಖರ್ಚು ಎಷ್ಟು? ಯಾತರ ಸಂಬಂಧ ಜಮಾ ಆಗಿರುವದು ಮತ್ತು ಯಾತರ ಸಂಬಂಧ ಖರ್ಚಾಗಿರುವದೆಂಬದು ತಿಳಿಯುವದು.

(೬) **ಬೈಠೀಕೀರ್ದಿ:—** (ನಮೂನೆಯನ್ನು ೨ನೆಯ ಭಾಗದಲ್ಲಿ ನೋಡಿರಿ.) ವ್ಯವಹಾರ ನಡೆದಹಾಗೆ ತಪಶೀಲವಾರ ಜಮಾ ಖರ್ಚು ಬರೆದು, ವಾರಕ್ಕೊಮ್ಮೆ, ತಿಂಗಳಿಗೊಮ್ಮೆ ಇಲ್ಲವೆ ಕೂಡಿದಾಗ ಶಿಲಕು ತೆಗೆಯುವ ವಹಿಗೆ "**ಬೈಠೀಕೀರ್ದಿ**", ಅನ್ನುವರು. ಬೈಠೀ ಕೀರ್ದಿಯನ್ನು ಸ್ವಲ್ಪ ವ್ಯವಹಾರ ಮಾಡುವವರು ಇಡುವರು. ಮತ್ತು ಕೀರ್ದಿಯೊಳಗಿನ ಎಲ್ಲ ರಕಮುಗಳಿಗೆ ಮಿತಿಯನ್ನು ಹಾಕುವರು.

(೭) ವರ್ಷಾರಂಭದ ದಿವಸ ಕೀರ್ದಿಯಲ್ಲಿ ಬರೆಯತಕ್ಕ ನೋಂದುಗಳು.

ಮೊದಲು ಕೀರ್ದಿಯ ಮೇಲ್ವಿಳಾಸವನ್ನು ಬರೆದು, ಬಳಿಕ ಭಾಂಡವಲಿನ ಅಂದರೆ ಜಿಂದಗಿಯ ಜಮಾಖರ್ಚನ್ನು ಬರೆಯುವರು.

**ಭಾಂಡವಲಿನ ನೋಂದುಗಳು:—** (ಅ) ವರ್ಷಾರಂಭದ ದಿವಸವೇ ಅಂಗಡಿಯು **ಹೊಸದಾಗಿ ಚಾಲೂ ಆಗಿದ್ದರೆ:—** ಮೊದಲಿಗೆ ವರ್ಷಾರಂಭದ ಮಿತಿಯನ್ನು ಕಟ್ಟಿ, ಅಂದರೆ ತಿಂಗಳ ಸಹಿತ ಮಿತಿ, ಶಕೆ, ಸಂವತ್ಸರ ಮುಂತಾದವುಗಳನ್ನು ಇಲ್ಲವೆ ತಾರೀಖು, ತಿಂಗಳು, ಇಸ್ವಿಗಳನ್ನು ಬರೆದು ಅದರ ಕೆಳಗೆ ಹಿಂದೆ ಹೇಳಿದಂತೆ ಜಮಾ ______ ರೂ. ಖರ್ಚು ______ ರೂ. ಎಂದು ಬರೆಯುವರು. ತರುವಾಯ ವ್ಯವಹಾರಕ್ಕಾಗಿ ತೆಗೆದಿಟ್ಟ ಹಣವನ್ನು ಖುದ್ದ ಖಾತೆಗೆ ಇಲ್ಲವೆ ಭಾಂಡವಲ ಖಾತೆಗೆ ಜಮೆ ಹಿಡಿಯುವರು. ಬಳಿಕ ಆ ದಿವಸ ನಡೆದ ವ್ಯವಹಾರದ ಜಮಾಖರ್ಚು ಬರೆದಿಡುವರು.

ಸೂಚನೆ:— ದಿನದ ಜಮಾಖರ್ಚು ಬರೆಕೊಳ್ಳುವ ಮೊದಲು ಕೆಲವರು ಜಮೆಯ ಸದರುಗಳಲ್ಲಿ (ತಪಶೀಲಿನ ರಕಾನೆಗಳಲ್ಲಿ) ಈ ಹೊತ್ತಿನ ಜಮೆ, ಖರ್ಚಿನ ಸದರುಗಳಲ್ಲಿ ಈ ಹೊತ್ತಿನ ಖರ್ಚು ಎಂಬ ಶಬ್ದಗಳನ್ನು ಬರೆದು, ಬಳಿಕ ಆ ದಿವಸ ನಡೆದ ವ್ಯವಹಾರದ ಜಮಾಖರ್ಚನ್ನು ಬರೆಯುವರು.

(ಬ) **ಮೊದಲಿನ ಅಂಗಡಿಯ ವ್ಯವಹಾರವು ಮುಂದೆ ಸಾಗಿದ್ದರೆ:—** ಕಳೆದ ವರ್ಷದ ಅಖೈರ ಅಥಾವೆಯ ಮೇಲಿಂದ ಅವಲ ಅಥಾವೆಯನ್ನು ಮೊದಲಿಗೆ ಬರೆದು ಬಳಿಕ ಕಳೆದ ವರ್ಷದ ಕೊನೆಯ ಭಂಡವಲಿನ ( ಹೊಸ ವರ್ಷದ ಆರಂಭದ ರೋಖು ಶಿಲಕು, ಹಾಗೂ ಶಿಲಕು ಮಾಲು ಮತ್ತು ಇತರ ಜಿಂದಿಗಿಯ ) ಜಮಾಖರ್ಚನ್ನು ಬರೆಯುವರು.

## ದಿನದ ಜಮಾಖರ್ಚು

(೮) ಜಮಾಖರ್ಚು ಮಾಡುವ ರಕಮುಗಳು ಮುಖ್ಯವಾಗಿ ಎರಡು (೧) **ರೋಖು** (೨) **ಪರಭಾರೆ** (ಜಮಾಖರ್ಚಿ)

(೧) **ರೋಖು:—** ಪ್ರತ್ಯಕ್ಷ ಹಣ ಬಂದರೆ, ಇಲ್ಲವೆ ಹೋದರೆ, ( ಕೊಟ್ಟರೆ ) **ರೋಖು** ಅನ್ನುವರು.

(೨) **ಪರಭಾರೆ:—** ಪ್ರತ್ಯಕ್ಷ ಹಣ ಕೊಡದೆ, ಹಾಗೂ ತೆಗೆದುಕೊಳ್ಳದೆ, ಯಾವದೊಂದು ಪರ್ಯಾಯದಿಂದ ಮಾಡಿದ, ಕೊಡಕೊಳ್ಳುವ ವ್ಯವಹಾರದ ಸಂಬಂಧದ ರಕಮುಗಳಿಗೆ, **ಪರಭಾರೆ** ಇಲ್ಲವೆ **ಜಮಾಖರ್ಚಿ** ರಕಮುಗಳೆನ್ನುವರು.

ಉದ್ದರಿ, ಹವಾಲಿ ಮುಂತಾದ ವ್ಯವಹಾರಗಳ ಸಂಬಂಧದ ರಕಮುಗಳೂ, ಲಾವಣಿ, ಸಂಜಾಯತ ಮುಂತಾದ ಕರಾರುಗಳಂತೆ ಮಾಡಿದ ವ್ಯವಹಾರದ ರಕಮುಗಳೂ ಪರಭಾರೆಯಾಗಿರುತ್ತವೆ. ಈ ವ್ಯವಹಾರಗಳಲ್ಲಿ ರೋಖು ಹಣದ ಸಂಬಂಧವೇನೂ ಬರುವದಿಲ್ಲವಾದಕಾರಣ ಪ್ರತ್ಯಕ್ಷ ಶಿಲಕಿನಲ್ಲಿ ಏನೂ ಹೆಚ್ಚು ಕಡಿಮೆಯಾಗುವದಿಲ್ಲ. ಇಂಥ ವ್ಯವಹಾರಗಳಲ್ಲಿ ಒಂದು ಖಾತೆಗೆ ಜಮಾ ಬರಕೊಂಡ ರಕಮನ್ನೇ ಅದಕ್ಕೆ ಸಂಬಂಧಿಸಿದ ಬೇರೊಂದು ಖಾತೆಗೆ ಖರ್ಚು ಬರೆಯಬೇಕಾಗುವದು. ಹೀಗೆ ಒಂದೇ ರಕಮನ್ನು ಜಮೆಯ ಕಡೆಗೂ ಖರ್ಚಿನ ಕಡೆಗೂ ಬೇರೆ ಬೇರೆ ಖಾತೆಗಳಿಗೆ ಬರಕೊಳ್ಳಬೇಕಾಗುವದರಿಂದ ಈ ರಕಮುಗಳಿಗೆ " ಜಮಾಖರ್ಚಿಯ " ರಕಮುಗಳೆನ್ನುವರು. ಕೆಲವರು ಇವಕ್ಕೆ ಮುಜೇರೀಜಿ ಅಥವಾ ಪರಭಾರೆ ರಕಮುಗಳೆನ್ನುವರು.

**(೯) ಜಮಾಖರ್ಚು ಬರೆಯುವಾಗ ಮುಖ್ಯವಾಗಿ ಲಕ್ಷ್ಯದಲ್ಲಿಡತಕ್ಕ ಸಂಗತಿಗಳು:— ಜಮಾಖರ್ಚು ಮಾಡುವ ರಕಮು ರೋಖೋ ಜಮಾಖರ್ಚಿಯೋ** ಎಂಬದನ್ನು ತಿಳಿದುಕೊಂಡು ರೋಖು ಬಂದಿದ್ದರೆ ಜಮಾ, ರೋಖು ಕೊಟ್ಟಿದ್ದರೆ ಖರ್ಚು ಬರೆಯುವರು.

ಸೂಚನೆ:—(೧) ರೋಖು ಬಂದ ಹಣವನ್ನು ಮೊದಲು ಎಣಿಸಿಕೊಂಡು ಆ ಬಳಿಕ ಕೀರ್ದಿಯಲ್ಲಿ ಜಮಾ ಬರೆಯಬೇಕು. ಹಾಗೂ ರೋಖು ಕೊಡತಕ್ಕ ಹಣವನ್ನು ಕೀರ್ದಿಯಲ್ಲಿ ಮೊದಲಿಗೆ ಖರ್ಚು ಬರೆದು, ಬಳಿಕ ಕೊಡಬೇಕು. (೨) ಜಮಾಖರ್ಚಿಯ ರಕಮನ್ನು ಬರೆಯುವದಿದ್ದರೆ, ಮೊದಲಿಗೆ ಜಮೆಯ ಕಡೆಗೆ ಬರೆದ ರಕಮನ್ನು ಕೂಡಲೆ ಖರ್ಚಿನ ಕಡೆಗೆ, ಹಾಗೂ ಮೊದಲಿಗೆ ಖರ್ಚಿನ ಕಡೆಗೆ ಬರೆದ ರಕಮನ್ನು ಕೂಡಲೆ ಜಮೆಯ ಕಡೆಗೆ ಬರೆಯುವರು. (ಈ ಬುಕ್ಕಿನ ಆರಂಭದ ಪುಟದಲ್ಲಿ ಬರೆದ ಸೂಚನೆಗಳನ್ನು ನೋಡಿರಿ.)

## ಜಮಾಖರ್ಚಿನ ರಕಮುಗಳನ್ನು ಹಾಗೂ ತಪಶೀಲನ್ನು ಕೀರ್ದಿಯಲ್ಲಿ ಬರೆಯುತಕ್ಕ ಸ್ಥಳಗಳು

(೧೦) ಜಮಾ ಹಿಡಿಯುತಕ್ಕ ರಕಮನ್ನು ಸದರಿಗೆ (ಜಮೆಯ ಸದರುಗಳ ಮೊದಲನೆಯ ರಕಾನೆಯಲ್ಲಿ) ಬರೆದು, ಅದರ ಮುಂದೆ ತಪಶೀಲಿನ ರಕಾನೆಗಳಲ್ಲಿ ಯಾರ ಕಡೆಯಿಂದ ಯಾತರ ಬಗ್ಗೆ ಬಂದಿರುವದೆಂಬದನ್ನು ಬರೆಯುವರು. ಹಾಗು ಆ ಹಣವು ಪ್ರತ್ಯಕ್ಷವಾಗಿ ಯಾರ ಕೈಯಿಂದ ಜಮಾ ಆಗಿರುವದೋ ಅವರ ಹೆಸರು ಅಂದರೆ ಹಸ್ತೆ ಹಚ್ಚಿ, ಬಳಿಕ ಅದರ ಕೆಳಗೆ ಖಾ. ಪಾ. ( ಖಾತೆಯ ಪಾನು ) ಎಂದು ಬರೆದು ಅದರ ಕೆಳಗೆ
ಹೀಗೆ ಜೋಡು ಗೆರೆಗಳನ್ನು ಎಳೆಯುವರು.

(೧೧) ಖರ್ಚು ಹಿಡಿಯುತಕ್ಕ ರಕಮುಗಳನ್ನು ಸದರಿಗೆ ( ಖರ್ಚಿನ ಸದರುಗಳ ಮೊದಲನೆಯ ರಕಾನೆಯಲ್ಲಿ ) ಬರೆದು, ಅದರ ಮುಂದಿನ ರಕಾನೆಗಳಲ್ಲಿ ಯಾರಿಗೆ ಯಾತರ ಬಗ್ಗೆ ಕೊಟ್ಟಿರುವದೆಂಬದನ್ನು ಬರೆದು, ಹಸ್ತೆ ಹಚ್ಚಿ, ಅದರ ಕೆಳಗೆ ಖಾ. ಪಾ. ಎಂದು ಬರೆದು ಮೇಲೆ ಹೇಳಿದಂತೆ ಜೋಡು ಗೆರೆಗಳನ್ನು ಎಳೆಯುವರು.

ಸೂಚನೆ:—(೧) ಇಸಮುವಾರ ಖಾತೆಗಳಿಗೆ ಅವರು ಇರುವ ಊರು ಬರೆಯುವರು. (೨) ಒಬ್ಬನ ಮುಖಾಂತರ ಅಥವಾ ಸಾಕ್ಷಿಯಿಂದ ವ್ಯವಹಾರ ನಡೆದಿದ್ದರೆ ಅಂಥವರ ಗುಜಾರತ ಹಚ್ಚುವರು. ಉದಾ:— (೧) ಅನ ಕಡೆಯಿಂದ ಸಮುಗೆ ಕೆಲವು ಹಣ ಬರತಕ್ಕದ್ದಿದ್ದು, ಅದನ್ನು ಅನ ಪತ್ರದ

ಪ್ರಕಾರ, ಬನು, ಕನ ಕೂಡ ಕಳಿಸಿದರೆ ಆ ರಕಮಿಗೆ ಬನ ಗುಜಾರತಿ, ಮತ್ತು ಕನ ಹಸ್ತೆ ಹಚ್ಚಬೇಕು. ಉದಾ:— (೨) ಆನು ಬನಿಗೆ ಕೆಲವು ಹಣ ಕೊಡತಕ್ಕದ್ದಿದ್ದು, ಬನಿಗೆ ಹಣ ಕೊಡುವ ಬಗ್ಗೆ ಆನು ನಮಗೆ ಪತ್ರ ಬರೆದರೆ— ನಮಗೆ ಬನ ಗುರುತು ಇಲ್ಲದ ಪಕ್ಷದಲ್ಲಿ ನಾವು ಕನ ಸಾಕ್ಷಿಯಿಟ್ಟು ಬನಿಗೆ ಹಣ ಕೊಟ್ಟರೆ ಈ ರಕಮಿಗೆ ಕನ ಗುಜಾರತಿ, ಬನ ಹಸ್ತೆ ಹಚ್ಚಬೇಕು.

(೧೨) **ತಪಶೀಲಿನ ರಕಮುಗಳನ್ನು ಹಾಗು ಅವುಗಳ ವಿವರಗಳನ್ನು ಬರೆಯುವ ಸ್ಥಳಗಳು:—** ಸದರಿಗೆ ಬರೆದ ರಕಮಿನ ವಿವರವನ್ನು ಬರೆಯುವದಿದ್ದರೆ ತಪಶೀಲಿನ ಮೊದಲನೆಯ ರಕಾನೆಯಲ್ಲಿ ವಿವರದ ರಕಮನ್ನು ಬರೆದು ಅದರ ಮುಂದಿನ ಎರಡು ರಕಾನೆಗಳಲ್ಲಿ ವಿವರವನ್ನು ಬರೆಯುವರು. ಬಳಿಕ ಆ ರಕಮುಗಳ ಬೇರೀಜನ್ನು ಆ ರಕಾನೆಯ ಪ್ಟೇ ಗೆರೆಯ ಕೆಳಗೆ ಬರೆಯುವರು. (ಕೀರ್ದಿಯ ನಮೂನೆ ನ. ೪-೫-೭ ನೋಡಿರಿ.)

ತಪಶೀಲಿನ ರಕಮಿನಲ್ಲಿ ಪುನಃ ತಪಶೀಲು ಬರೆಯುವದಿದ್ದರೆ:— ಯಾವ ರಕಮಿನ ವಿವರವನ್ನು ಪುನಃ ಬರೆಯುತಕ್ಕದ್ದಿರುವದೋ ಅದರ ಕೆಳಗೆ ತಪಶೀಲಿನ ಎರಡನೆಯ ರಕಾನೆಯಲ್ಲಿ ರಕಮಿನ ಅಂಕಗಳನ್ನೂ ಅದರ ಮುಂದೆ ವಿವರವನ್ನೂ ಬರೆಯುವರು. (ನಂ. ೧೧೩ ನೋಡಿರಿ.) ಇದಕ್ಕೆ **ಪೋಟಸಿ ಬರೆಯೋಣ** ಅನ್ನುವರು.

(೧೩) **ದಿನದ ಶಿಲಕು ತೆಗೆಯುವದು ಮತ್ತು ನಿತಿ ಬಾಯಿಗೂಡಿಸುವದು—** ದಿನಂಪ್ರತಿಯ ಜಮಾಖರ್ಚು ಬರೆಯುವದಾದ ಬಳಿಕ, ಜಮೆಯ ಕಡೆಯ ರೋಖು ಹಾಗೂ ಪರಭಾರೆಯ ರಕಮುಗಳನ್ನು ಒಟ್ಟುಗೂಡಿಸಿ, ಬಂದ ಒಟ್ಟನ್ನು ತಪಶೀಲಿನ ಮೊದಲನೆಯ ರಕಾನೆಯಲ್ಲಿ ಬರೆದು ಅದರ ಮುಂದೆ "ಇಂದಿನ ಜಮೆಯ ತಪಶೀಲು" ಇಲ್ಲವೆ "ತಪಶೀಲು" ಎಂದು ಬರೆಯುವರು. ಹಾಗೂ ಪೋಟಶಿಯಲ್ಲಿ ಇಂತಿಷ್ಟು ರೋಖು, ಇಂತಿಷ್ಟು ಪರಭಾರೆ ಎಂದು ಬರೆಯುವರು. ಬಳಿಕ ಅವೆರಡು ರಕಮುಗಳ ಬೇರೀಜು ಮಾಡುವರು. ಈ ಬೇರೀಜು ತಪಶೀಲಿನ ಮೊದಲನೆಯ ರಕಾನೆಯಲ್ಲಿ ಬರೆದ ರಕಮಿಗೆ ಸರಿಯಾಗುವದು.

ಇದರಂತೆ ಖರ್ಚಿನ ಎಲ್ಲ ರಕಮುಗಳ ಬೇರೀಜು ಮಾಡಿ, ಮೇಲೆ ಹೇಳಿದಂತೆ ತಪಶೀಲಿನಲ್ಲಿ ರೋಖು ಪರಭಾರೆಯ ರಕಮುಗಳನ್ನು ತೋರಿಸುವರು. ಜಮೆಯ ಹಾಗೂ ಖರ್ಚಿನ ಪರಭಾರೆಯ ರಕಮುಗಳ ಬೇರೀಜುಗಳು ಯಾವಾಗಲೂ ಸರಿ ಇರುವವು.

ಹಿಂದಿನ ಶಿಲಕು ಸಹಿತ ಜಮೆಯ ಬೇರೀಜಿನಲ್ಲಿ ಖರ್ಚಿನ ಒಟ್ಟು ಬೇರೀಜನ್ನು ಕಳೆದರೆ ಉಳಿವದ್ದೇ ನಾಳಿನ ಶಿಲಕು ಆಗುವದು. (ಈ ರಕಮಿನ ಅಂಕಿಗೂ ಬಳಿಯಲ್ಲಿದ್ದ ರೋಖು ಶಿಲಕಿಗೂ ಮೇಳ ಆಗಲಿಕ್ಕೆ ಬೇಕು.) ಇದನ್ನು ಖರ್ಚಿನ ಕಡೆಗೆ ಸದರಿಗೆ ಬರೆದು ಅದರ ಮುಂದೆ ನಾಳಿನ ಶಿಲಕು ಎಂದು ಬರೆಯುವರು.

ಜಮೆಯ ಕಡೆಯ ಬೇರೀಜಿನಲ್ಲಿ ಆರಂಭದ ಶಿಲಕು ಕೂಡಿಸಿ, ಬಂದ ಒಟ್ಟನ್ನು

# ೪ನೆಯ ಪ್ರಕರಣ

## ಖತಾವಣಿಯನ್ನು ಕುರಿತು

(೧) **ಖಾತೆ:—** ಯಾವದೊಂದು ಇಸಮಿನ ಇಲ್ಲವೆ ಬಾಬಿನ ಕೊಡಕೊಳ್ಳುವ ಲೆಕ್ಕವು ಹಾಗೂ ಜೀನಸಿನ ಮಾರಾಟದಿಂದಾದ ಲಾಭ ಹಾನಿಯು ಸರಿಯಾಗಿ ತಿಳಿಯುವದಕ್ಕಾಗಿ, ಇಸಮಿನ, ಬಾಬಿನ, ಹಾಗು ಜೀನಸಿನ ಹೆಸರಿನಿಂದ ಒತ್ತಟ್ಟಿಗೆ ಬರೆವ ಜಮಾಖರ್ಚಿಗೆ **ಖಾತೆ** ಅನ್ನುವರು. ಖಾತೆಗಳು ಅಸಂಖ್ಯೆವಿದ್ದರೂ ಅವುಗಳಲ್ಲಿ (ಅ) **ಇಸಮುವಾರ** (ಬ) **ಜೀನಸುವಾರ** (ಕ) **ಬಾಬುವಾರ** ಖಾತೆಗಳೆಂದು ಮೂರೇ ಪ್ರಕಾರಗಳುಂಟು.

(ಅ) **ಇಸಮುವಾರ ಖಾತೆ:—** ಇಸಮಿನ ವ್ಯವಹಾರವನ್ನು ಬರೆದಿಡುವ ಖಾತೆಗಳಿಗೆ ಇಸಮುವಾರ ಖಾತೆಗಳೆನ್ನುವರು. ಹಲವರು ಒಟ್ಟಾಗಿ (ಸಂಘದಿಂದ) ಇಟ್ಟ ಅಂಗಡಿಯ ಹೆಸರಿನ ಖಾತೆಗಳು ಇಸಮುವಾರ ಖಾತೆಗಳೇ ಆಗುವವು. ಉದಾ— ಖಾತೆ-ಕರೆಪ್ಪ ಮೊರಬ ಸಾ॥ ಹುಬ್ಬಳ್ಳಿ. ಖಾತೆ—ವ್ಯಾಪಾರೋತ್ತೇಜಕ ಕಂಪನಿ, ಧಾರವಾಡ. ಖಾತೆ— ದಿ ಅರ್ಬನ್ ಬ್ಯಾಂಕ ಆಲೂರ.

(ಬ) **ಜೀನಸುವಾರ ಖಾತೆ:—** ಮಾರಾಟದ ಸರಕಿನ ಹಾಗು ಸ್ಥಾವರ ಜಂಗಮ ಒಡವೆಗಳ ಸಂಬಂಧದ ವ್ಯವಹಾರದ ಲೆಕ್ಕವನ್ನು ಬರೆದಿಡುವ ಖಾತೆಗಳಿಗೆ ಜೀನಸುವಾರ ಖಾತೆಗಳೆನ್ನುವರು. ಉದಾ:— ಬಂಗಾರ ಖಾತೆ, ಧಾನ್ಯ ಖಾತೆ, (ಇಲ್ಲವೆ ಪ್ರತ್ಯೇಕ ಜೀನಸಿನ ಖಾತೆ ಅಂದರೆ ಜೋಳದ ಖಾತೆ, ಗೋದಿಯ ಖಾತೆ) ಡೆಡ್‌ಸ್ಟಾಕ ಖಾತೆ, ಹುಂಡೀ ಖರೀದಿ ವಿಕ್ರಿ ಖಾತೆ.

(ಕ) **ಬಾಬುವಾರ ಖಾತೆ:—** ಉತ್ಪನ್ನದ ಹಾಗು ಖರ್ಚಿನ ವ್ಯವಹಾರದ ಲೆಕ್ಕವನ್ನು ಬರೆದಿಡುವ ಖಾತೆಗಳು **ಬಾಬುವಾರ ಖಾತೆಗಳು.** ಉದಾ:— ದಲಾಲಿ, ಧರ್ಮಾದಾವ, ಬಡ್ಡಿ, ಪಗಾರ ಖಾತೆಗಳು.

(೨) ಖಾತೆಗಳ ವಹಿಗಳು ಎರಡು ಪ್ರಕಾರದವು. (ಅ) ಖತಾವಣಿ (ಬ) ಪಠಾಣ ವಹಿ.

(ಅ) **ಖತಾವಣಿ:—** ಕೀರ್ದಿಗೆ ಮೇಳ ಆಗುವಂತೆ ರಕಮಿನ ಲೆಕ್ಕವನ್ನೂ ಕೀರ್ದಿ ಪಾನು, ಮಿತಿ, ಇಲ್ಲವೆ ತಾರೀಖು ಮುಂತಾದವುಗಳನ್ನೂ ಬರೆದಿಡುವ ಖಾತೆಗಳ ವಹಿಗೆ ಖತಾವಣಿಯನ್ನುವರು. ಖತಾವಣಿಯಲ್ಲಿ ಕೆಲವರು ಕೊಂಡ ಮತ್ತು ಮಾರಿದ ಸರಕುಗಳ ಪರಿಮಾಣವನ್ನು ಬರೆದಿಡುವರು. ಈ ಬರಹದಿಂದ ತಮ್ಮಲ್ಲಿಯ ಶಿಲಕು ಮಾಲಿನ ಲೆಕ್ಕವು ಆಯಾ ಖಾತೆಗಳಲ್ಲಿಯೇ ದೊರೆಯುವದು.

**ಪಠಾಣ ವಹಿ :—** (ನಮೂನೆಯನ್ನು ೨ನೆಯ ಭಾಗದಲ್ಲಿ ನೋಡಿರಿ.) **ಕೀರ್ದಿಯಂತೆ**

ವಹಿ ಇಲ್ಲವೆ ಬೈಠೀ ಖತಾವಣಿಯನ್ನುವರು. ಖತಾವಣಿಯೊಳಗಿನ ಯಾವದೊಂದು ರಕಮಿನ ತಪಶೀಲು ಬೇಕಾಗಿದ್ದರೆ ಕೀರ್ದಿಯನ್ನು ನೋಡಬೇಕಾಗುವದು. ಆದರೆ ಪಠಾಣವಹಿಯೊಳಗಿನ ಪ್ರತಿಯೊಂದು ಖಾತೆಯಲ್ಲಿ ತಪಶೀಲು ದೊರೆಯುವದರಿಂದ ಕೀರ್ದಿಯನ್ನು ನೋಡುವ ಕಾರಣ ಬೀಳುವದಿಲ್ಲ. ಇದರಿಂದ ಕೀರ್ದಿ ಕಳೆದರೂ ವ್ಯವಹಾರದ ತಪಶೀಲು ಸಿಗುವದಕ್ಕೆ ತೊಂದರೆಯಾಗುವದಿಲ್ಲ. ವ್ಯವಹಾರಸ್ಥರು ತಮಗೆ ಅವಶ್ಯವಿದ್ದಹಾಗೆ ಖತಾವಣಿ ಇಲ್ಲವೆ ಪಠಾಣವಹಿ ಇವುಗಳಲ್ಲಿ ಯಾವುದಾದರೊಂದು ಇಲ್ಲವೆ ಎರಡೂ ತರದ ವಹಿಗಳನ್ನಿಡುವರು.

ಇದನ್ನು ಪ್ರತಿ ದಿವಸ ಶಿಲಕು ತೆಗೆಯುವ ಅಪೇಕ್ಷೆಯಿಲ್ಲದ ಕಿರುಕಳ ವ್ಯಾಪಾರಸ್ಥರೂ, ಯಾವದೊಂದು ಇಸಮಿನ ಇಲ್ಲವೆ ಬಾಬಿನ ಸಂಬಂಧದ ವ್ಯವಹಾರವನ್ನು ದೊಡ್ಡ ಪ್ರಮಾಣದಿಂದ ಸಾಗಿಸುತ್ತಿರುವ ವ್ಯಾಪಾರಸ್ಥರೂ ಇಡುವರು.

# ಖತಾವಣಿಯ ಉಪಯೋಗ

(೧) ಖತಾವಣಿಯ ಮೇಲಿಂದ ಪ್ರತಿಯೊಂದು ಜೀನಸಿನ ಖರೀದಿ, ವಿಕರಿಯೂ, ವ್ಯವಹಾರದಲ್ಲಿ ಆದ ಲಾಭ ಹಾನಿಯೂ ಹಾಗು ಯಾವದೊಂದು ಇಸಮಿನ ಕಡೆಯಿಂದ ಇಲ್ಲವೆ ಬಾಬಿನಿಂದ ಬರತಕ್ಕದ್ದೆಷ್ಟು ? ಕೊಡತಕ್ಕದ್ದೆಷ್ಟು ? ಎಂಬುವದು ಒತ್ತಟ್ಟಿಗೆ ತಿಳಿಯುವದು. ಇದೇ ಖತಾವಣಿಯ ಮುಖ್ಯ ಉಪಯೋಗವು.

(೨) ಖತಾವಣಿಯ ಆರಂಭವನ್ನು ಕೆಳಗೆ ಹೇಳಿದಂತೆ ಮಾಡುವರು.

(ಅ) ಮೊದಲಿಗೆ ಶ್ರೀಕಾರವನ್ನು ಖತಾವಣಿಯ ಮುಖಪೃಷ್ಠದಲ್ಲಿ ಬರೆದು ಅದರ ಕೆಳಗೆ ಖತಾವಣಿಯ ಮೇಲ್ವಿಳಾಸವನ್ನು (ಕೀರ್ದಿಯ ಮೇಲ್ವಿಳಾಸದಂತೆ) ಬರೆಯುವರು.

(ಬ) ಬಳಿಕ ಅಕ್ಷರಗಳ ಅನುಕ್ರಮದಂತೆ ಖಾತೆಗಳನ್ನು ಬರಕೊಳ್ಳುವದರ ಸಲುವಾಗಿ ಖತಾವಣಿಯ ಮೊದಲಿನ ಕೆಲವು ಪಾನುಗಳ ಮೇಲ್ಗಡೆಯಲ್ಲಿ, ಅ ಆ ಇ ಈ.... ಕ ಖ ಇತ್ಯಾದಿ ಮೂಲಾಕ್ಷರಗಳನ್ನು ಕ್ರಮದಿಂದ ಬರೆದಿಡುವರು. ಮುಂದೆ ಖತಾವಣಿಯಲ್ಲಿ ಬರಕೊಳ್ಳುತ್ತ ಹೋದ ಖಾತೆಗಳ ಹೆಸರುಗಳನ್ನು ಆಯಾ ಖಾತೆಗಳ ಆದ್ಯಕ್ಷರಗಳುಳ್ಳ ಪಾನಿನಲ್ಲಿ ಕ್ರಮದಿಂದ ಬರೆದಿಡುವರು. ಹಾಗೂ ಅವುಗಳ ಮುಂದೆ ಆಯಾ ಖಾತೆಗಳ ಪಾನುಗಳನ್ನು ಹಾಕುವರು. ಹೀಗೆ ಬರೆದಿಡುವದರಿಂದ ಖಾತೆಗಳ ಅಕ್ಷರಾನುಕ್ರಮಣಿಕೆಯು ತಯಾರಾಗುವದು. ಈ ಅನುಕ್ರಮಣಿಕೆಯ ಮೇಲಿಂದ ಖತಾವಣಿಯಲ್ಲಿ ಯಾವ ಖಾತೆಯು ಎಷ್ಟನೆಯ ಪಾನಿನಲ್ಲಿರುವದೆಂಬುದು ಬೇಗನೆ ಗೊತ್ತಾಗುವದು. ( ಖತಾವಣಿಯ ನಮೂನೆಯಲ್ಲಿ ಖಾತೆಗಳ ಅನುಕ್ರಮಣಿಕೆಯನ್ನು ನೋಡಿರಿ. )

(ಕ) **ಖಾತೆಗಳನ್ನು ಹಾಕುವದು:—** ಖತಾವಣಿಯ ಒಂದು ಪಾನಿನಲ್ಲಿ ಖಾತೆಯ ಹೆಸರನ್ನು (ಬೀತವಳಿಯಲ್ಲಿ) ಬರೆದು ಅದರ ಕೆಳಗೆ ಎಡಗಡೆಗೆ ಜಮಾ——ರೂ. ಬಲಗಡೆಗೆ ಖರ್ಚು——ರೂ. ಎಂದು ಬರೆಯುವರು.

(೪) ಕೀರ್ದಿಯಲ್ಲಿ ನೋಂದಾದ ಎಲ್ಲ ರಕಮುಗಳನ್ನು ಖತಾವಣಿಯಲ್ಲಿ ಆಯಾ ಖಾತೆಗಳಿಗೆ ಬಾರ ಮಾಡುವರು. (ಅಂದರೆ ಬರೆಯುವರು ಅಥವಾ ಏರಿಸುವರು) ಆದರೆ ದಿನದ ಶಿಲಕಿನ ರಕಮನ್ನು ಖಾತೆಗೆ ಏರಿಸುವದಿಲ್ಲ. ವರ್ಷಾರಂಭದ ಮತ್ತು ವರ್ಷದ ಕೊನೆಯ ಶಿಲಕನ್ನು ಖುದ್ದ ಖಾತೆಗೆ ಏರಿಸುವರು.

(೫) **ಕೀರ್ದಿಯೊಳಗಿನ ರಕಮುಗಳನ್ನು ಖಾತೆಗೆ ಏರಿಸುವದು:—** ಕೀರ್ದಿಯೊಳಗಿನ ದಿನದ ಶಿಲಕಿನ ಹೊರತು ಜಮೆಯ ಕಡೆಯ ರಕಮುಗಳನ್ನು ಆಯಾ ಖಾತೆಗಳಲ್ಲಿ ಜಮೆಯ ಕಡೆಗೆ, ಖರ್ಚಿನ ಕಡೆಯ ರಕಮುಗಳನ್ನು ಆಯಾ ಖಾತೆಗಳಲ್ಲಿ ಖರ್ಚಿನ ಕಡೆಗೆ ಬರೆದು ಅವುಗಳ ಮುಂದೆ "ಕೀ. ಪಾ." (ಕೀರ್ದಿಯ ಪಾನು) ಎಂದು ಬರೆಯಬೇಕು. ಮತ್ತು ಕೀರ್ದಿಯ ಪಾನಿನ ಅಂಕಿಯನ್ನು ಹಾಗು ಮಿತಿಯನ್ನು ಬರೆಯಬೇಕು. ಬಳಿಕ ಈ ಖಾತೆಯ ಪಾನಿನ ಅಂಕಿಯನ್ನು ಕೀರ್ದಿಯಲ್ಲಿ (ಮೊದಲಿಗೆ ಬರೆದಿಟ್ಟ ಖಾ. ಪಾ. ಎಂಬ ಶಬ್ದಗಳ ಮುಂದೆ) ಬರೆಯಬೇಕು. ಇದರಿಂದ ಕೀರ್ದಿಯೊಳಗಿನ ರಕಮುಗಳು ಖಾತೆಯಲ್ಲಿ ಬೇಗ ಸಿಗುವವು.

ಸೂಚನೆ:—(೧) ಕೆಲವರು ಖಾತೆಯಲ್ಲಿ ಜಮೆಯ ಕಡೆಗೂ, ಖರ್ಚಿನ ಕಡೆಗೂ, (ತಪಶೀಲಿನ ರಕಾನೆಗಳಲ್ಲಿ) ಮೊದಲಿಗೆ ತಿಂಗಳು ಹಾಕಿ, ಅದರ ಕೆಳಗೆ ಕೀರ್ದಿಯೊಳಗಿನ ರಕಮುಗಳನ್ನು ಬಾರ ಮಾಡಿಕೊಳ್ಳುವರು. ಅಂದರೆ (ರಕಮು, ಕೀರ್ದಿಪಾನು, ಮಿತಿಗಳನ್ನು ಹಾಕುವರು.) ತಿಂಗಳ ಕೊನೆಗೆ ಹೊಟ್ಟಿಯೊಳಗಿನ ಒಟ್ಟು ರಕಮನ್ನು ಸದರಿಗೆ ಬರೆಯುವರು. ಇದರಿಂದ ಖಾತೆಗಳ ತಿಂಗಳ ತೇರೀಜು ಮಾಡುವದಕ್ಕೆ ಸುಲಭವಾಗುವದು.

(೨) ಕೆಲವರು ಖಾತೆ ಕೀರ್ದಿಗಳನ್ನು ತಪಾಸ ಮಾಡುವಾಗ ಆಯಾ ರಕಮುಗಳ ಸಮೀಪದಲ್ಲಿ √, V, I ಇತ್ಯಾದಿ ಗುರುತುಗಳಲ್ಲಿ ಯಾವುದಾದರೊಂದು ಗುರುತನ್ನು ಹಾಕುವರು.

(೩) ದಿನದ ಶಿಲಕನ್ನು ಖಾತೆಗೆ ಏರಿಸುವದಿಲ್ಲ. ಆದುದರಿಂದ ಖತಾವಣಿಯೊಳಗಿನ ರಕಮುಗಳು ಶಿಲಕಿನ ಹೊರ್ತಾಗಿ ಕೀರ್ದಿಯೊಳಗಿನ ರಕಮುಗಳಿಗೆ ಸರಿಯಾಗುವವು.

(೬) **ಯಾವದೊಂದು ಖಾತೆಯ ಪಾನು ತುಂಬಿದ ಬಳಿಕ, ಆ ಖಾತೆಗೆ ಏರಿಸತಕ್ಕ ರಕಮುಗಳಿದ್ದರೆ:—** ಖತಾವಣಿಯೊಳಗಿನ ಕೋರಾಪಾನಿನಲ್ಲಿ ಮುಗಿದ ಖಾತೆಯ ಪುರವಣಿಯ ಖಾತೆಯನ್ನು ಹಾಕಿ. ಅದರ ಮುಂದೆ ಮುಗಿದ ಖಾತೆಯ ಪಾನಿನ ಅಂಕಿಯನ್ನು ಹಾಕುವರು. ಹಾಗು ಪುರವಣಿ ಖಾತೆಯ ಪಾನಿನ ಅಂಕಿಯನ್ನು ಮುಗಿದ ಖಾತೆಯ ಬೇರೀಜಿನ ಬುಡದಲ್ಲಿ ಹಾಕುವರು. ಮತ್ತು ಮುಗಿದ ಖಾತೆಯ ಜಮೆ, ಹಾಗು ಖರ್ಚಿನ ಬೇರೀಜುಗಳನ್ನು ಪುರವಣಿ ಖಾತೆಯಲ್ಲಿ ಬರೆದಿಡುವರು. (ಖತಾವಣಿಯಲ್ಲಿ ಪ್ರಿಸ್ಟೈಲಪ್ಪಾ ಕಂಕಣಮೇಲಿ ಇವರ ಖಾತೆ ನಂ. ೩೧ ೫೬ ನೋಡಿರಿ.)

(೭) **ಕೀರ್ದಿ ಹಾಗು ಖತಾವಣಿಗಳ ಮಹತ್ವ:—** ಕೀರ್ದಿಯ ಮೇಲಿಂದ ಪ್ರತಿಯೊಂದು ರಕಮಿನ ತಪಶೀಲು ತಿಳಿಯುವದಲ್ಲದೆ ದಿನದ ಶಿಲಕು ಸಹ ತಿಳಿಯುವದು. ಮತ್ತು ಖತಾವಣಿಯ ಮೇಲಿಂದ ಪ್ರತಿಯೊಂದು ಇಸಮಿನಿಂದ ಹಾಗು ಬಾಬಿನಿಂದ ಕೊಡಕೊಂಬುವದು ಎಷ್ಟು ಎಂಬುವದು ತಿಳಿಯುವದು. ಕೀರ್ದಿ ಕಳಕೊಂಡರೆ

ಖತಾವಣಿ ಮೇಲಿಂದ ಮೊದಲಿನಂತೆ ಕೀರ್ದಿಯನ್ನು ತಯಾರ ಮಾಡಲಿಕ್ಕೆ ಬರುವದಿಲ್ಲ. ತಪಶೀಲಿನ ಹೊರ್ತು ಕೀರ್ದಿ ತಯಾರ ಮಾಡಬಹುದು. ಆದರೆ ಖತಾವಣಿ ಕಳಕೊಂಡರೆ ಕೀರ್ದಿಯ ಮೇಲಿಂದ ಮೊದಲಿನಂತೆ ಖತಾವಣಿ ಯನ್ನು ತಯಾರ ಮಾಡಲಿಕ್ಕೆ ಬರುವದು. ಆದುದರಿಂದ ಕೀರ್ದಿ ಮತ್ತು ಖತಾವಣಿ ಗಳಲ್ಲಿ ಕೀರ್ದಿಯು ಮಹತ್ವವಾದದ್ದು.

(೮) **ವಖಾರ ಬುಕ್ಕು** ಅಥವಾ ಮಾರಾಟದ ಸರಕುಗಳ ಖತಾವಣಿ:— ಈ ವಹಿಯಲ್ಲಿ **ಸ್ವಂತ** ಖರೀದಿ ಹಾಗೂ ವಿಕರಿ ಮಾಡಿದ ಮಾಲಿನ ಲೆಕ್ಕವನ್ನೂ ಆಸಾಮಿ ಗಳ ಕಡೆಯಿಂದ ಬಂದ ಮಾಲನ್ನೂ ಅದರಲ್ಲಿ ವಿಕರಿಯಾದ ಮಾಲಿನ ಲೆಕ್ಕವನ್ನೂ ಜೀನಸಿನ ಖಾತೆವಾರ ಬರೆದಿರುವರು.

(೯) **ಬೋಟಖಾತೆ:—** ಕಿರುಕಳ ವ್ಯಾಪಾರ ಮಾಡುವವರು ಕೀರ್ದಿಯನ್ನಿಡುವ ದಿಲ್ಲ. ಒಂದು ಖಾತೆ ವಹಿಯನ್ನು ಕಟ್ಟಿ ಅದರಲ್ಲಿ ತಾವು ಉದ್ದರೀ ತಂದ ಹಾಗು ಉದ್ದರೀ ಕೊಟ್ಟ ಇಸಮುಗಳ ಖಾತೆಗಳನ್ನಿಟ್ಟು ಆಯಾ ಖಾತೆಗಳಲ್ಲಿ ಜೀನಸಿನ ಬೆಲೆ, ಪರಿಮಾಣ, ಮಿತಿ, ಹಸ್ತೆ ಮುಂತಾದವುಗಳನ್ನು ಬರೆದಿಡುವರು. ಮತ್ತು ತಾವು ಕೊಟ್ಟ ಹಣವನ್ನೂ ಗಿರಾಕಿಗಳಿಂದ ವಸೂಲಾದ ಹಣವನ್ನೂ ಆಯಾ ಖಾತೆಗಳಲ್ಲಿ ವಜಾ ಹಾಕುವರು. ಮತ್ತು ಅವುಗಳ ಮುಂದೆ ಮಿತಿ ಹಾಗು ಹಸ್ತೆ ಬರೆಯುವರು. ಈ ವಹಿಗೆ ಬೋಟ ಖಾತೆ ಅನ್ನುವರು.

ಯಾವದೊಂದು ಖಾತೆಗೆ ಬರತಕ್ಕ ರಕಮುಗಳು ಹಲವು ಇದ್ದರೆ, ಆ ಎಲ್ಲ ರಕಮುಗಳನ್ನು ಒಟ್ಟು ಗೂಡಿಸುವದಕ್ಕಾಗಿ ಒಂದು ಕಾಗದದ ಮೇಲೆ ಬರಕೊಳ್ಳುವರು. ಈ ಟಿಪ್ಪಣಿಗೆ ಜೋಟ-ಖತ ಅನ್ನುವರು. (ಜೋಟಖತ ಎಂಬುದು ಕೇವಲ ಟಿಪ್ಪಣಿಯು, ಖಾತೆಯಲ್ಲ.)



# ೩ನೆಯ ಪ್ರಕರಣ

---

## ಜಮಾಖರ್ಚು ಬರೆಯುವ ನಿಯಮಗಳು

(೧) **ರೋಖ ಖರೀದಿ–ವಿಕರಿ:—** ರೋಖು ಹಣ ಕೊಟ್ಟು ಸೀರಿ, ಧೋತರ ಮುಂತಾದ ಜವಳಿಯನ್ನು: ಅಕ್ಕಿ, ಜೋಳ ಮುಂತಾದ ಧಾನ್ಯಗಳನ್ನು ಖರೀದಿ ಮಾಡಿದರೆ ಆಯಾ ಜೀನಸುಗಳ ಖಾತೆಗಳಿಗೆ, **ಇಲ್ಲವೆ ಜವಳಿ, ಧಾನ್ಯ** ಮುಂತಾದ ಖಾತೆಗಳಿಗೆ (*೫-೬-೭) ಖರ್ಚು ಬರೆಯುವರು. ರೋಖು **ಹಣ ತೆಗೆದುಕೊಂಡು** ವಿಕರಿ ಮಾಡಿದರೆ ಮೊದಲು ಖರ್ಚು ಬರೆದಿರುವ ಆಯಾ ಖಾತೆಗಳಿಗೆ (೪–೧೦–೧೧–೧೨) **ಜಮೆ** ಹಿಡಿಯುವರು.

ಜೀನಸಿನ ಖರೀದಿಯ ಸಲುವಾಗಿಯೂ, ಅದನ್ನು ತರಿಸುವದರ ಸಲುವಾಗಿಯೂ ಖರ್ಚಾದ ಬಂಡಿಯ ಬಾಡಿಗೆ, ದಲಾಲಿ, ಹಮಾಲಿ, ಜಕಾತಿ, ಊಟದ ಖರ್ಚು ಮುಂತಾದವುಗಳ ರಕಮುಗಳನ್ನೆಲ್ಲ ಆ ಜೀನಸಿನ ಖಾತೆಗೆ ಖರ್ಚು ಬರೆಯುವರು.

ಇದರಂತೆ ಜೀನಸು ವಿಕ್ರಿ ಮಾಡುವದಕ್ಕಾಗಿ ಮಾಡಿದ ಯಾವತ್ತೂ ಬಗೆಯ ಖರ್ಚನ್ನು ಆ ಜೀನಸಿನ ಖಾತೆಗೆ ಖರ್ಚು ಹಾಕುವರು.

ಟೀಪು:— ಕೆಲವರು ಮೇಲೆ ಹೇಳಿದ ಬಾಡಿಗಿ (೯೪) ದಲಾಲಿ (೯೧) ಮುಂತಾದವುಗಳನ್ನು ಜೀನಸಿನ ಖಾತೆಗೆ ಖರ್ಚು ಹಾಕದೆ, ಆಯಾ ಬಾಬುಗಳ ಖಾತೆಗೆ ಖರ್ಚು ಹಾಕುವರು. ಈ ಬಗೆಯ ಲೆಕ್ಕದಿಂದ ಆ ಜೀನಸಿನ ನಿಜವಾದ ಖರೀದಿಯ ಬೆಲೆಯೂ ವಿಕ್ರಿಯ ಬೆಲೆಯೂ, ಆ ಜೀನಸಿನ ವ್ಯವಹಾರದಿಂದಾದ ಲಾಭಹಾನಿಯೂ ಸರಿಯಾಗಿ ತಿಳಿಯಲಾರದು.

(೨) **ಉದ್ದರೀ ಖರೀದಿ–ವಿಕರಿ:—** ನಾವು ಮಂದಿಯ ಕಡೆಯಿಂದ ಯಾವದೊಂದು ಜೀನಸನ್ನು ಉದ್ದರೀ ತಂದರೆ:— ಆ ಜೀನಸನ್ನು ಯಾರ ಬಳಿಯಲ್ಲಿ ಉದ್ದರೀ ತಂದಿರುವೆವೋ ಅವರ ಹೆಸರಿಲೆ ಆ ಜೀನಸಿನ ಬೆಲೆಯನ್ನು (೨) ಜಮಾ ಹಿಡಿದು ಆ ಜೀನಸಿನ ಖಾತೆಗೆ (೫) ಖರ್ಚು ಬರೆಯಬೇಕು. ನಾವು ಯಾರಿಗಾದರ, ಮಾಲು ಉದ್ದರೀ ಕೊಟ್ಟರೆ:— ಮಾಲಿನ ಬೆಲೆಯನ್ನು ಆ ಜೀನಸಿನ ಖಾತೆಗೆ (೪) ಜಮೆ ಹಿಡಿದು, ಉದ್ದರೀ ಒಯ್ದವರ ಹೆಸರಿಲೆ (೮) ಖರ್ಚು ಬರೆಯಬೇಕು.

ಮಂದಿಯ ಕಡೆಯಿಂದ ಬರತಕ್ಕ ಬಾಕಿಯಲ್ಲಿ ಕೆಲವು ರೋಖು ಹಣ ಮತ್ತು ಕೆಲವು ಮಾಲು ಬಂದರೆ ಒಟ್ಟು ರಕಮನ್ನು ಅವರ ಹೆಸರಿಲೆ (೭೭) ಜಮೆ ಹಿಡಿದು, ತಪಶೀಲಿನಲ್ಲಿ ಇಂತಿಷ್ಟು ರೋಖು ಹಾಗು ಇಂತಿಷ್ಟು ಬೆಲೆಯ ಮಾಲು ಎಂದು ಬರೆದು ಮಾಲಿನ ಬೆಲೆಯನ್ನು ಮಾಲಿನ ಖಾತೆಗೆ (೮೨) ಖರ್ಚು ಬರೆಯುವರು.

---

*ಪ್ರತಿಯೊಂದು ವ್ಯವಹಾರದ ಸಂಬಂಧವಾಗಿ ಜಮಾ ಖರ್ಚು ಹ್ಯಾಗೆ ಬರಕೊಳ್ಳಬೇಕೆಂದು ಉದಾಹರಣೆಗಳೊಂದಿಗೆ ತಟ್ಟನೆ ಸ್ಪಷ್ಟವಾಗಿ ತಿಳಿದುಕೊಳ್ಳುವದಕ್ಕೆ ಅನುಕೂಲವಾಗಬೇಕೆಂದು ಕೀರ್ದಿಯ ನಮೂನೆಯಲ್ಲಿ ಆಯಾ ವ್ಯವಹಾರಗಳ ಸಂಬಂಧವಾಗಿ ಬರೆದಿರುವ ಕಲಮುಗಳ ಕ್ರಮಾಂಕಗಳು (ನಂಬರುಗಳು) ಅಲ್ಲಲ್ಲಿಗೆ ಕಂಸಗಳಲ್ಲಿ ಬರೆಯಲ್ಪಟ್ಟಿವೆ.

(೩) **ಸಂಜಾಯತ ಕರಾರಿನಿಂದ ಜೀನಸು ಮಾರಿದರೆ :—** ಆ ಮಾಲಿನ ಬೆಲೆಯನ್ನು ಮಾಲಿನ ಖಾತೆಗೆ (೭೮) ಜಮೆ ಹಿಡಿದು ಒಯ್ದವನ ಹೆಸರಿಲೆ (೮೦) ಖರ್ಚು ಬರೆಯುವರು.

(೪) **ಸಂಜಾಯತ ಕರಾರಿನಿಂದ ಮಾರಿದ ಜೀನಸಿನಲ್ಲಿ ಮಾರಾಟವಾಗದೆ ಉಳಿದ ಜೀನಸು, ಹಾಗು ವಿಕ್ರಿಯ ಹಣ ಬಂದರೆ:—** ಒಟ್ಟು ರಕಮನ್ನು ಮಾಲು ಒಯ್ದವನ ಹೆಸರಿಲೆ (೯೬) ಜಮೆ ಹಿಡಿದು, ಅದರ ತಪಶೀಲಿನಲ್ಲಿ ಇಂತಿಷ್ಟು ರೋಖು, ಇಂತಿಷ್ಟು ತಿರುಗಿ ಬಂದ ಮಾಲಿನ ಬೆಲೆ ಎಂದು ಬರೆಯುವರು. ಹಾಗು ಮಾಲಿನ ಬೆಲೆಯನ್ನು ಮಾಲಿನ ಖಾತೆಗೆ (೧೦೦) ಖರ್ಚು ಬರೆಯುವರು.

ಸೂಚನೆ:—ವಾಪಸು ಬಂದ ಜೀನಸಿನ ಬೆಲೆಯನ್ನು ಮೊದಲು ವಿಕರಿ ಮಾಡಿದ ದರದಂತೆ ಆಕಾರ ಮಾಡಬೇಕು.

(೫) **ನಾವು ಸಂಜಾಯತ ಕರಾರಿನಿಂದ ಜೀನಸು ಖರೀದಿ ಮಾಡಿದರೆ :—** ಆ ಜೀನಸು ಯಾರಲ್ಲಿ ಖರೀದಿ ಮಾಡಿರುವೆವೋ ಅವರ ಹೆಸರಿಲೆ ( ಜೀನಸಿನ ಬೆಲೆಯನ್ನು ) (೭೧) ಜಮೆ ಹಿಡಿದು, ಜೀನಸಿನ ಖಾತೆಗೆ (೭೩) ಖರ್ಚು ಬರೆಯಬೇಕು.

(೬) **ನಾವು ಸಂಜಾಯತ ಕರಾರಿನಿಂದ ಖರೀದಿ ಮಾಡಿದ ಜೀನಸಿನಲ್ಲಿ ಮಾರಾಟವಾಗದೆ ಉಳಿದ ಜೀನಸನ್ನು ಹಾಗು ಸಾವುಕಾರನಿಗೆ ಕೊಡತಕ್ಕ ಬಾಕಿಯ ಹಣವನ್ನು ವಾಪಸ ಕೊಟ್ಟರೆ :—** ಒಟ್ಟು ರಕಮನ್ನು ಸಾವುಕಾರನ ಹೆಸರಿಲೆ (೧೦೫) ಖರ್ಚು ಬರೆದು, ತಪಶೀಲಿನಲ್ಲಿ ಇಂತಿಷ್ಟು ರೋಖು, ಇಂತಿಷ್ಟು ತಿರುಗಿ ಕೊಟ್ಟ ಮಾಲಿನ ಬೆಲೆ ಎಂದು ಬರೆಯಬೇಕು. ಹಾಗು ತಿರುಗಿ ಕೊಟ್ಟ ಜೀನಸಿನ ಬೆಲೆಯನ್ನು ಆ ಜೀನ-ಸಿನ ಖಾತೆಗೆ (   ) ಜಮೆ ಹಿಡಿಯಬೇಕು. ( ಜೀನಸಿನ ಬೆಲೆಯನ್ನು ಖರೀದಿ ದರದಂತೆ ಆಕಾರ ಮಾಡಬೇಕು. )

## ಹವಾಲಿಯ ಜಮಾಖರ್ಚು

(೭) **ನಮಗೆ ಒಬ್ಬನಿಂದ ಬರತಕ್ಕ ಹಣದ ಬಗ್ಗೆ ಬೇರೊಬ್ಬನು ಹವಾಲಿ ಹಿಡಿದರೆ :—** ಹವಾಲಿ ಕೊಟ್ಟವನ ಹೆಸರಿಲೆ (   ) ಜಮಾ, ಹವಾಲಿ ಹಿಡಿದವನ ಹೆಸರಿಲೆ (   ) ಖರ್ಚು ಬರೆಯಬೇಕು.

(೮) **ನಾವು ಒಬ್ಬನಿಗೆ ಕೊಡತಕ್ಕ ಹಣದ ಬಗ್ಗೆ ಬೇರೊಬ್ಬನು ನಮ್ಮ ಹವಾಲಿ ಹಿಡಿದರೆ :—** ನಮ್ಮ ಮೊದಲಿನ ಧನಕೋನ ಹೆಸರಿಲೆ (   ) ಖರ್ಚು ಹಾಕಿ ಹವಾಲಿ ಹಿಡಿದವನ ಹೆಸರಿಲೆ (   ) ಜಮಾ ಬರೆಯಬೇಕು.

(೯) **ಒಬ್ಬನು ಬೇರೊಬ್ಬನಿಗೆ** (ಉ:— ಅನು ಬನಿಗೆ) **ಕೊಡತಕ್ಕ ಹಣಕ್ಕೆ ನಾವೇ ಹವಾಲಿಯಾದರೆ:—** ಅ ನ ಹೆಸರಿಲೆ ಖರ್ಚು, ಬ ನ ಹೆಸರಿಲೆ ಜಮಾ ಬರೆಯಬೇಕು.

ಸೂಚನೆ :— ಹವಾಲಿ ವ್ಯವಹಾರದಲ್ಲಿ (೧) ಸಾವುಕಾರ (೨) ಸಾಲಗಾರ (೩) ಹವಾಲಿ ಹಿಡಿದವ ಈ ಮೂವರ ಸಂಬಂಧವು ಬರುವದು. ಈ ಮೂವರಲ್ಲಿ ಪ್ರತಿಯೊಬ್ಬರು ತಮ್ಮ ತಮ್ಮ ಜಮಾ ಖರ್ಚು ಹೇಗೆ ಬರಕೊಳ್ಳಬೇಕೆಂಬುದು ಮೇಲಿನ ನಿಯಮಗಳಿಂದ ಸಹಜವಾಗಿ ತಿಳಿಯುವಂತಿರುತ್ತದೆ.

(೧೦) **ಹಸ್ತೆ ಬಂದಿಯ** ಪ್ರಕಾರ ಹಣ ಕೊಡುವ ಕರಾರಿನಿಂದ **ಹೊಲವನ್ನು ಲಾವಣಿಗೆ ಕೊಟ್ಟರೆ** ಲಾವಣಿಯ ಹಣವನ್ನು ರೈತನ ಹೆಸರಿಲೆ (೧೨೪) ಖರ್ಚು ಬರೆದು ಖುದ್ದ ಖಾತೆಗೆ (೧೨೧) ಇಲ್ಲವೆ ಬೇಸಾಯದ ಖಾತೆಗೆ ಜಮೆ ಹಿಡಿಯುವರು. ರೈತನ ಕಡೆಯಿಂದ ಹಣ ಬಂದ ಬಳಿಕ ಅವನ ಹೆಸರಿಲೆ ಜಮಾ ಹಿಡಿಯುವರು.

## ಕೆಲವು ಮುಖ್ಯ ಖಾತೆಗಳು ಅವುಗಳ ಜಮಾಖರ್ಚು ಮಾಡುವ ನಿಯಮುಗಳು

(೧೧) **ಭಾಂಡವಲ ಖಾತೆ:—** ಹಲವು ಜನರು ಒಟ್ಟಾಗಿ ಪಾಲಿನಿಂದ ವ್ಯಾಪಾರ ಮಾಡುವದಕ್ಕಾಗಿ ಕೂಡಿ ಹಾಕಿದ ಹಣಕ್ಕೆ **ಭಾಂಡವಲ**ವೆನ್ನುವರು. ಈ ಹಣವನ್ನು **ಭಾಂಡವಲ ಖಾತೆಗೆ** ಜಮೆ ಹಿಡಿಯುವರು.

ಸೂಚನೆ:—(೧) ಪಾಲುಗಾರರು ತಾವು ಹಾಕಿದ ಭಾಂಡವಲಿನ ಅಂಶದಂತೆ ವ್ಯಾಪಾರದಲ್ಲಿ ಬಂದ ಲಾಭವನ್ನು ಹಂಚಿಕೊಳ್ಳುವರು.

(೨) ಈ ಅಂಗಡಿಗಳಲ್ಲಿ ಪಾಲುಗಾರರ ಖಾಸಗೀ ಖರ್ಚಿನ ಲೆಕ್ಕವನ್ನು ಇಡುವದಿಲ್ಲ. ಪಾಲುಗಾರರು ತಮ್ಮ ಉಪಯೋಗದ ಬಗ್ಗೆ ಅಂಗಡಿಯೊಳಗಿನ ಮಾಲು ಇಲ್ಲವೆ ರೋಖು ಹಣ ತೆಗೆದು ಕೊಂಡರೆ ಅದನ್ನು ಅವರವರ ಖಾತೆಗೆ ಖರ್ಚು ಹಾಕುವರು.

(೩) ಅಂಗಡಿಯಲ್ಲಿ ಪಾಲುಗಾರರಿರದಿದ್ದರೆ ವ್ಯವಹಾರಸ್ಥರು ಭಾಂಡವಲ ಖಾತೆಯನ್ನು ಇಲ್ಲವೆ ತಮ್ಮ ಸ್ವಂತ ಹೆಸರಿನ (ಖುದ್ದ) ಖಾತೆಯನ್ನು ಇಟ್ಟು ಅದರಲ್ಲಿ ತಮ್ಮ ಭಾಂಡವಲಿನ ಜಮಾಖರ್ಚನ್ನು ಬರೆಯುವರು.

(೪) ಪಾಲಿನಿಂದ ವ್ಯಾಪಾರ ಮಾಡುವ ಅಂಗಡಿಗಳಿಗೆ ಸಂಘದ ಅಂಗಡಿಗಳೆನ್ನುವರು. ಇವುಗಳಿಗೆ ಇಂಗ್ಲಿಷದಲ್ಲಿ ಕಂಪನಿ, ಸೊಸಾಯಿಟಿ, ಬ್ಯಾಂಕ ಮುಂತಾದ ಹೆಸರುಗಳುಂಟು. ಉದಾ-ಧಾರವಾಡ ವ್ಯಾಪಾರೋತ್ತೇಜಕ ಕಂಪನಿ; ದಿ ಅರ್ಬನ್ ಕೋ-ಅಪರೇಟಿವ್ಹ ಸೊಸಾಯಿಟಿ, ಆಲೂರ; ಶ್ರೀ ಮಧ್ವ ಬ್ಯಾಂಕ, ಧಾರವಾಡ;

(೧೨) **ಖುದ್ದ ಖಾತೆ :—** ವ್ಯವಹಾರಕ್ಕಾಗಿ ತೆಗೆದಿಟ್ಟ ಹಣವನ್ನು (೧) ಜಮೆ ಹಿಡಿಯುವ ಖಾತೆಗೆ ಖುದ್ದ ಖಾತೆ ಅನ್ನುವರು. ಮತ್ತು ಅದರಲ್ಲಿ ಖರ್ಚಾದ ಹಣವನ್ನು ಅದೇ ಖಾತೆಗೆ ಖರ್ಚು ಬರೆಯುವರು. ಹೊಲ, ಮನೆ ಮುಂತಾದವುಗಳಿಂದ ಬಂದ ಉತ್ಪನ್ನವನ್ನು ಇದೇ ಖಾತೆಗೆ (೧೨೧) ಜಮೆ ಹಿಡಿಯುವರು. ಹಾಗು ಹೊಲ ಮನೆಗಳ ದುರಸ್ತಿಯ ಬಗ್ಗೆ ಕೊಟ್ಟ ಹಣವನ್ನು ಇದೇ ಖಾತೆಗೆ ಖರ್ಚು (೩೩) ಬರೆಯುವರು.

(೧೩) **ಠೇವು ಖಾತೆ:—** ಯಾರಾದರೂ ನಮ್ಮಲ್ಲಿ ಠೇವು (ಇಡುಗಂಟು) ತಂದು ಇಟ್ಟರೆ ಆ ಹಣವನ್ನು (೨೧) ಜಮೆ ಹಿಡಿಯುವ ಖಾತೆಗೆ ಠೇವುಖಾತೆ ಅನ್ನುವರು. ಮುಂದೆ ಆ ಹಣ ಕೊಟ್ಟರೆ, ಅದೇ ಖಾತೆಗೆ (೧೦೩) ಖರ್ಚು ಬರೆಯುವರು. ಅದರ ಸಂಬಂಧ ಬಡ್ಡೀ ಕೊಟ್ಟರೆ ಬಡ್ಡೀ ಖಾತೆಗೆ (೧೦೪) ಖರ್ಚು ಬರೆಯುವರು.

ಸೂಚನೆ:— ವ್ಯವಹಾರಸ್ಥರು ಬಹುತರವಾಗಿ ಠೇವು ಖಾತೆಯನ್ನಿಡುವದಿಲ್ಲ. ಆ ಇಸಮಿನ ಖಾತೆಯಲ್ಲಿ " ಠೇವು ಇಟ್ಟದ್ದು " ಎಂದು ಬರೆಯುವರು.

(೨) ಪೋಸ್ಟ ಆಫೀಸಿನ ಸೇವ್ಹಿಂಗ್ಸ ಬ್ಯಾಂಕಿನಲ್ಲಾಗಲಿ, ಇಲ್ಲವೆ ಯಾವದೊಂದು ಸೊಸಾಯಿಟಿಯಲ್ಲಾಗಲಿ, ಠೇವು ಇಟ್ಟರೆ:— ಆ ಹಣವನ್ನು ಠೇವು ಖಾತೆಗೆ ಇಲ್ಲವೆ ಆಯಾ ಹೆಸರಿನ ಖಾತೆಗಳಿಗೆ ಖರ್ಚು ಹಾಕುವರು. ಮತ್ತು ತಿರುಗಿ ತಂದ ಹಣವನ್ನು ಠೇವು ಖಾತೆಗೆ ಇಲ್ಲವೆ ಆಯಾ ಹೆಸರಿನ ಖಾತೆಗಳಿಗೆ ಜಮಾ ಹಿಡಿಯುವರು.

ಠೇವುದಾರರಿಗೆ ತಮ್ಮ ಠೇವಿನ ಲೆಕ್ಕವು ಸ್ಪಷ್ಟವಾಗಿ ತಿಳಿಯಬೇಕೆಂದು ಅವರವರ ಹೆಸರಿನ ಪಾಸ ಬುಕ್ಕು (ಖಾತೆಯ ನಕಲಿನ ವಹಿ) ಗಳಲ್ಲಿ ಠೇವು ಇಟ್ಟ ಹಾಗು ತಿರುಗಿ ತೆಗೆದುಕೊಂಡ ಹಣದ ಲೆಕ್ಕವನ್ನೂ ಬಡ್ಡಿಯ ಹಣದ ಲೆಕ್ಕವನ್ನೂ ಬ್ಯಾಂಕಿನವರು ಆಗಾಗ್ಗೆ ಬರೆಕೊಡುವರು.

(೧೪) **ಅಮಾನತ [ಅನಾಮತ] ಖಾತೆ:—** (ಅ-ನಾಮ= ಹೆಸರಿಲ್ಲದ ಅಂದರೆ ಕೊಡಕೊಳ್ಳುವ ವ್ಯವಹಾರವಿಲ್ಲದ ಜನರ ಖಾತೆ) ತಮ್ಮ ಅಂಗಡಿಯಲ್ಲಿ ಕೊಡಕೊಳ್ಳುವ ವ್ಯವಹಾರವಿಲ್ಲದ ಜನರಿಂದ **ಮೋಘಮ** ಬಂದ **ಹಣವನ್ನು** (೨೦) ಜಮಾ ಹಿಡಿಯುವ ಖಾತೆಗೆ ಅನಾಮತ ಖಾತೆ ಅನ್ನುವರು. ಹಣ ಕಳಿಸುವವನ ಕಡೆಯಿಂದ ವ್ಯವಸ್ಥೆಯ ಬಗ್ಗೆ ಪತ್ರ ಬಂದಬಳಿಕ ಇದೇ ಖಾತೆಗೆ (೩-೨) ಖರ್ಚು ಬರೆದು ಯೋಗ್ಯ ಖಾತೆಗೆ (೨೮—೨೯) ಜಮಾ ಹಿಡಿಯುವರು. ಈ ಖಾತೆಗೆ "ಅಮಾನತ ಖಾತೆ" ಎಂದು ಅನ್ನುವ ರೂಢಿಯಿದೆ.

ತಮ್ಮ ಅಂಗಡಿಯಲ್ಲಿ ಕೊಡಕೊಳ್ಳುವ ವ್ಯವಹಾರವಿದ್ದ ಜನರಿಂದ ಬಂದ ಹಣವನ್ನು ಅವರವರ ಖಾತೆಗಳಿಗೆ ಜಮಾ ಹಿಡಿಯುವರು.

ಕೀರ್ದಿಯೊಳಗಿನ ಶಿಲಕಿಗೂ, ಬಳಿಯಲ್ಲಿದ್ದ ರೋಖ ಶಿಲಕಿಗೂ ಮೇಳ ಆಗದ ದಿವಸ ರೋಖ ಶಿಲಕು ಹೆಚ್ಚಾಗಿದ್ದರೆ, ಆ ಹಣವನ್ನು ಈ ಖಾತೆಗೆ ಜಮಾ, ಕಡಿಮೆ ಬಿದ್ದಿದ್ದರೆ ಈ ಖಾತೆಗೆ ಖರ್ಚು ಹಾಕಿ ಕೀರ್ದಿ ಬಂದ ಮಾಡುವರು. ಮುಂದೆ ತಪ್ಪು ತಿಳಿದ ಬಳಿಕ ಯೋಗ್ಯ ಖಾತೆಗೆ ಆ ಹಣದ ಜಮಾಖರ್ಚು ಮಾಡಿಕೊಳ್ಳುವರು.

(೧೫) **ಮನೆಯ ಖರ್ಚು ಖಾತೆ:—** ಪ್ರಪಂಚಕ್ಕೆ ಬೇಕಾಗುವ ಅರಿವೆ ಅಂಚಡಿ, ಕಾಳು ಕಡಿ ಮುಂತಾದ ಪದಾರ್ಥಗಳನ್ನು ಸ್ವಂತ ಅಂಗಡಿಯಿಂದಾಗಲಿ, ಕ್ರಯ ಕೊಟ್ಟು ಬೇರೆ ಕಡೆಯಿಂದಾಗಲಿ ತರಿಸಬೇಕಾಗುವದು. ಆ ಬಗ್ಗೆ ಖರ್ಚಾದ ಹಣದ ಲೆಕ್ಕವು ಒತ್ತಟ್ಟಿಗೆ ತಿಳಿಯಬೇಕೆಂದು ಆ ಹಣವನ್ನು (೨೬—೫೫—೬೭) ಖರ್ಚು ಹಾಕುವ ಖಾತೆಗೆ **"ಮನೆಯ ಖರ್ಚು ಖಾತೆ"** ಅನ್ನುವರು. ಮನೆಯ ಬಳಿಕೆಗೆ ತಂದ ಮಾಲಿನಲ್ಲಿ ಏನಿಕೆ ಬೆಲೆಯ ಮಾಲನ್ನು ವಾಪಸ ಮಾಡಿದರೆ ಅದನ್ನು ಇದೇ ಖಾತೆಗೆ *ಜಮಾ ಹಿಡಿದು ಮಾಲಿನ ಖಾತೆಗೆ ಖರ್ಚು (೮೧) ಹಾಕುವರು. ಬೇರೆ ಕಡೆಯಿಂದ ರೋಖ

---

*ಖರ್ಚು ಖಾತೆಗೆ ಜಮಾ ಹಿಡಿಯುವದು ಸರಿಯಲ್ಲವೆಂಬ ತಿಳಿವಳಿಕೆಯಿಂದಾಗಲಿ, ಸ್ವಂತ ಅಂಗಡಿಯೊಳಗಿಂದ ಮನೆಯ ಬಳಿಕೆಗೆ ಕೊಟ್ಟ ಮಾಲಿನಲ್ಲಿ ತಿರುಗಿಬಂದ ಮಾಲಿನ ಲೆಕ್ಕವು ಒತ್ತಟ್ಟಿಗೆ ತಿಳಿಯಬೇಕೆಂದಾಗಲಿ "ವಾಘ ಜಸ್ತಖಾತೆ" ಎಂಬ ಖಾತೆಯನ್ನಿಟ್ಟು ಅದರಲ್ಲಿ ಆ ಮಾಲಿನ ಬೆಲೆಯನ್ನು (೭೯) ಜಮಾ ಹಿಡಿಯುವರು.

ಖರೀದಿ ಮಾಡಿ ತಂದ ಮಾಲನ್ನು ತಿರುಗಿ ಕೊಟ್ಟರೆ (ಅದರ ಬೆಲೆಯನ್ನು ಇದೇ ಖಾತೆಗೆ ಜಮಾ ಹಿಡಿಯುವರು.)

ಟೀಪು:— ಅಂಗಡಿಯ ಖರ್ಚು ಖಾತೆ, ಡೆಡ್‌ಸ್ಟಾಕ್ ಖಾತೆ ಮುಂತಾದ ಖರ್ಚು ಖಾತೆಗಳಿಗೆ ಜಮಾ ಹಿಡಿಯಲಿಕ್ಕೆ ಅಡ್ಡಿ ಏನೂ ತೋರುವದಿಲ್ಲ.

(೧೬) ***ತಸಲಮಾತ ಖಾತೆ:—** (ಉಪಯೋಗದ ಸಲುವಾಗಿ ಕೊಟ್ಟ ರಕಮಿನ ಖಾತೆ):—ಯಾವದೊಂದು ಕೆಲಸಕ್ಕೆ ಇಂತಿಷ್ಟೇ ಖರ್ಚು ಹಿಡಿಯುವದೆಂಬುದು ಮೊದಲಿಗೆ ನಿಶ್ಚಿತವಾಗಿ ತಿಳಿಯುವದಿಲ್ಲ. ಆಗ್ಗೆ ಏನಿಕೆ ಹಣವನ್ನು ಮಕ್ತೆದಾರನಿಗೆ ಮುಂಗಡ ಕೊಟ್ಟು (೨೫) ಖರ್ಚು ಬರೆಯುವ ಖಾತೆಗೆ **ತಸಲಮಾತ** ಖಾತೆ ಅನ್ನುವರು. ಆ ಕೆಲಸವು ಪೂರ್ಣವಾದ ಬಳಿಕ ಆ ರಕಮನ್ನು ಇದೇ ಖಾತೆಗೆ (೩೦) ಜಮೆ ಹಿಡಿದು, ಖರ್ಚಾದಷ್ಟು ಹಣವನ್ನು ಯೋಗ್ಯ ಖಾತೆಗೆ (೩೩) ಖರ್ಚು ಬರೆಯುವರು.

(೧೭) **ರವಾನಗಿ ಖಾತೆ:—** ಜೀನಸಿನ ಖರೀದಿಯ ಬೆಸೆಯಿಂದ ಇಲ್ಲವೆ ಯಾರಿಗಾದರು ಕೊಡತಕ್ಕ ಹಣವನ್ನು ಕಳಿಸುವಾಗ್ಗೆ ಆ ಹಣವನ್ನು (೧೬) ಖರ್ಚು ಬರೆದಿರುವ ಖಾತೆಗೆ **ರವಾನಗಿ** ಖಾತೆ ಅನ್ನುವರು. ಆ ಜೀನಸು ಖರೀದಿಯಾಗಿ ತಮ್ಮ ಕಡೆಗೆ ಬಂದ ಬಳಿಕ, ಅಥವಾ ಕಳಿಸಿದ ಹಣವು ಮುಟ್ಟಿ ಪಾವತೀ ಬಂದ ಬಳಿಕ ಅದೇ ಖಾತೆಗೆ (೧೯) ಜಮಾ ಹಿಡಿದು, ಜೀನಸಿನ **ಖಾತೆಗೆ** (೨೩) ಇಲ್ಲವೆ ಯೋಗ್ಯ ಖಾತೆಗೆ ಖರ್ಚು ಹಾಕುವರು.

ಸೂಚನೆ:— (೧) ರವಾನಗಿ ಮಾಡಿದ ಹಣವು ಕಳವಾಗಿ ಹೋದರೆ:— ಆ ಹಣವನ್ನು ರವಾನಗಿ ಖಾತೆಗೆ ಜಮಾ ಹಿಡಿದು, ಹಣ ಒಯ್ದವನ ಹೆಸರಿಲೆ ಖರ್ಚು ಬರೆಯುವರು. ಮುಂದೆ ಆ ಹಣವು ಅವನಿಂದ ಯಾವ ಬಗೆಯಿಂದಲೂ ಬರದಿದ್ದರೆ, ಅದನ್ನು ಆವನ ಜಸರಿಲೆ ಜಮಾ ಹಿಡಿದು, ನಫಾ ತೋಟಾ ಖಾತೆಗೆ ಖರ್ಚು ಹಾಕುವರು.

(೨) ರವಾನಗಿ ಮಾಡಿದ ಹಣದಲ್ಲಿ ಕೆಲವು ಹಣ ತಿರುಗಿ ಬಂದರೆ:— ಒಟ್ಟು ಹಣವನ್ನು ರವಾನಗಿ ಖಾತೆಗೆ (೧೯) ಜಮಾ ಹಿಡಿದು, ಖರ್ಚಿನ ವಿವರವನ್ನೂ ತಿರುಗಿ ಬಂದ ಹಣವನ್ನೂ, ತಪಶೀಲಿನಲ್ಲಿ ಬರೆದು, ಖರ್ಚಾದ ಹಣವನ್ನು ಯೋಗ್ಯ ಖಾತೆಗೆ ಖರ್ಚು (೨೩-೨೪) ಹಾಕುವರು.

(೧೮) **ಧರ್ಮಾದಾವ ಖಾತೆ:—** ಯಾರಿಗಾದರೂ ಧರ್ಮಾರ್ಥವಾಗಿ ಕೊಟ್ಟ ಹಣವನ್ನು (೫೮) ಖರ್ಚು ಬರೆಯುವ ಖಾತೆಗೆ ಧರ್ಮಾದಾವ ಖಾತೆ ಅನ್ನುವರು.

ಹತ್ತಿ, ಅರಳಿ ಮುಂತಾದ ವ್ಯವಹಾರಗಳಲ್ಲಿ ಧರ್ಮಾದಾವ ಬಂದ ಹಣವನ್ನು ಇದೇ ಖಾತೆಗೆ (೧೩೦) ಜಮಾ ಹಿಡಿಯುವರು.

ಲಗ್ನಕಾರ್ಯ, ಮುಂಜಿ, ಅಂತ್ಯವಿಧಿ ಮುಂತಾದ ಸಂಸ್ಕಾರಗಳಿಗೆ ಆದ ಖರ್ಚನ್ನು (ಇವು ಆಕಸ್ಮಿಕ ಖರ್ಚುಗಳು. ಈ ಖರ್ಚಿನ ಹಣವನ್ನು ಮನೆಯ ಖರ್ಚು ಖಾತೆಗೆ ಖರ್ಚು ಹಾಕುವದಿಲ್ಲ.) ಇದೇ ಖಾತೆಗೆ ಖರ್ಚು ಬರೆಯುವರು.

---

*ತಸಲಮಾತ ಎಂಬುದು ತಸ್ಲೀಮಾತ್ ಎಂಬ ಅರಬೀ ಶಬ್ದದ ಅಪಭ್ರಂಶವಿದೆ. ಮೂಲಶಬ್ದ ತಸ್ಲೀಮ; ಇದರ ಬ. ವ. ತಸ್ಲೀಮಾತ (ಅಂದರೆ ಜೀರೆಯುವರಿಗೆ ಒಪ್ಪಿಸಿದ ಕೆಲಸಗಳು.) ಸರಕಾರಿ [illegible]

ಯಾವದೊಂದು ಸಾರ್ವಜನಿಕ ಹಿತದ ಕೆಲಸದ ಬಗ್ಗೆ (ಗುಡಿ, ಧರ್ಮಶಾಲೆಯು ಜೀರ್ಣೋದ್ಧಾರಕ್ಕೆ) ಧರ್ಮಾರ್ಥವಾಗಿ ಕೂಡಿಸಿದ ಹಣವನ್ನು ಈ ಖಾತೆಗೆ ಜಮೆ ಹಿಡಿಯುವದಿಲ್ಲ. ಅದಕ್ಕಾಗಿ ಪ್ರತ್ಯೇಕ ಖಾತೆಯನ್ನಿಟ್ಟು (ಉದಾ: ಗಂಗಾಧರ ಫಂಡ ಖಾತೆ) ಆ ಹಣವನ್ನು ಜಮಾ ಹಿಡಿಯುವರು. ಹಾಗೂ ಆ ಕೆಲಸದ ಬಗ್ಗೆ ಖರ್ಚಾದ ಹಣ ವನ್ನು ಆ ಫಂಡಿನ ಖಾತೆಗೆ ಖರ್ಚು ಹಾಕುವರು.

(೧೯) **ಸಾದಿಲವಾರ ಖಾತೆ:**— ಅಂಗಡಿಯ ಉಪಯೋಗಕ್ಕಾಗಿ ಕಾಗದ, ಮಸಿ, ಎಣ್ಣೆ ಮುಂತಾದ ಚಿಲ್ಲರ ಜೀನಸುಗಳನ್ನು **ಕೊಂಡರೆ ಆ ಹಣವನ್ನು** (೨೭–೪೪) ಖರ್ಚು ಬರೆಯುವ ಖಾತೆಗೆ ಸಾದಿಲವಾರ ಖಾತೆ ಅನ್ನುವರು.

(೨೦) **ಡೆಡ್ ಸ್ಟಾಕ್ ಖಾತೆ:**— ಅಂಗಡಿಯ ಉಪಯೋಗಕ್ಕಾಗಿ ಬಹು ದಿವಸ ಬಾಳುವ ಪೆಟ್ಟಿಗೆ, ಕಪಾಟು, ಮುಂತಾದ ಸಾಮಾನುಗಳನ್ನು ತೆಗೆದುಕೊಂಡರೆ ಆ ಹಣವನ್ನು (೧೨೭) ಖರ್ಚು ಬರೆಯುವ ಖಾತೆಗೆ ಡೆಡ್ ಸ್ಟಾಕ ಖಾತೆ ಅನ್ನುವರು. ಡೆಡ್‌ಸ್ಟಾಕ ಸಾಮಾನುಗಳಲ್ಲಿ ತಮಗೆ ಅನವಶ್ಯವಾಗಿರುವ ಸಾಮಾನುಗಳನ್ನು ಮಾರಿ ಬಂದ ಹಣವನ್ನು ಇದೇ ಖಾತೆಗೆ ಜಮೆ ಹಿಡಿಯುವರು.

ಟೀಪು:— ಡೆಡ್‌ಸ್ಟಾಕ್ ಸಾಮಾನುಗಳ ರಜಿಸ್ಟರ ಬುಕ್ಕು ಇಟ್ಟು ಅದರಲ್ಲಿ ಸಾಮಾನುಗಳ ಹೆಸರು, ಸಂಖ್ಯೆ, ಬೆಲೆ, ತೆಗೆದುಕೊಂಡ ಮಿತಿ ಮೊದಲಾದ ಅವಶ್ಯವಿದ್ದ ಮಾಹಿತಿಯನ್ನು ಬರೆದಿಡುವರು.

(೨೧) **ಪಗಾರ ಖಾತೆ:**— ಆಳಿಗೆ ಇಲ್ಲವೆ ಕಾರಕೂನರಿಗೆ ಜೀತ ಅಥವಾ ಸಂಬಳ ಕೊಟ್ಟು ಯಾವ ಖಾತೆಗೆ (೪೫) ಖರ್ಚು ಬರೆಯುವರೋ ಆ ಖಾತೆಗೆ ಪಗಾರ ಖಾತೆ ಅನ್ನುವರು. ವರ್ಷದ ಕೊನೆಯ ವರೆಗೆ ಇಲ್ಲವೆ ಯಾವದೊಂದು ಮುದ್ದತಿನ ವರೆಗೆ ದುಡಿಯುವ ಕರಾರು ಮಾಡಿ, ಕೆಲವು ಹಣ ಮುಂಗಡ ಕೊಟ್ಟರೆ ಆ ಹಣವನ್ನು ಆ ಇಸಮಿನ ಖಾತೆಗೆ (೭೭) ಖರ್ಚು ಬರೆಯುವರು. ಮುಂದೆ ಅವನು ಪೂರಾ ದಿನಗಳು ಮುಟ್ಟುವ ವರೆಗೆ ದುಡಿದರೆ, ಅವನಿಗೆ ಉಳಿದ ಹಣವನ್ನು ಕೊಟ್ಟು ಅವನ ಖಾತೆಗೆ (೯೯) ಖರ್ಚು ಹಾಕುವರು. ಬಳಿಕ ಅವನಿಗೆ ಕೊಟ್ಟ ಒಟ್ಟು ರಕಮನ್ನು ಅವನ ಖಾತೆಗೆ (೯೫) ಜಮಾ ಹಿಡಿದು, ಪಗಾರ ಖಾತೆಗೆ ಇಲ್ಲವೆ ಖುದ್ದ ಖಾತೆಗೆ (೧೦೭) ಖರ್ಚು ಹಾಕುವರು.

ಕೆಲವರು ವಾರಕ್ಕೊಮ್ಮೆ ಇಲ್ಲವೆ ಆಳುಗಳು ಬೇಡಿದಾಗ ತಕ್ಕಷ್ಟು ಹಣವನ್ನು ಕೊಟ್ಟು, ಅವರವರ ಹೆಸರಿಲೆ ಖರ್ಚು ಬರೆಯುವರು. ಮತ್ತು ವರ್ಷದ ಕೊನೆಗೆ ಪ್ರತಿಯೊಬ್ಬ ನವಕರನಿಗೆ ಕೊಟ್ಟ ಒಟ್ಟು ರಕಮನ್ನು ಅವರವರ ಹೆಸರಿಲೆ ಜಮಾ ಹಿಡಿದು, ಪಗಾರ ಖಾತೆಗೆ ಖರ್ಚು ಬರೆಯುವರು.

(೨೨) **ಅಂಗಡಿಯ ಖಾತೆ:**— [ಅಂಗಡಿಯ ಖರ್ಚು ಖಾತೆ] :— ಅಂಗಡಿಯ ಉಪಯೋಗಕ್ಕಾಗಿ ಕೊಂಡ ಪೆಟ್ಟಿಗೆ, ಕಪಾಟು, ಸಮೆ ಮುಂತಾದ ಸಾಮಾನುಗಳ ಬೆಲೆಯನ್ನೂ; ಕೀರ್ದಿ ಖತಾವಣಿ ಮುಂತಾದ ವಹಿಗಳನ್ನು ಕಟ್ಟಿಸಿದ ಬಗ್ಗೆ ಆದ ಖರ್ಚನ್ನೂ ಅಂಗಡೀ ಖಾತೆಗೆ ಖರ್ಚು ಬರೆಯುವರು.

ಇದಲ್ಲದೆ ಕಾಗದ, ಮಸಿ, ದೀಪದ ಎಣ್ಣೆ, ಗಿರಾಕಿಗಳ ಸನ್ಮಾನದ ಬಗ್ಗೆ ತಂದ ಎಲಿಯಡಿಕೆ ಮುಂತಾದವುಗಳಿಗಾದ ಚಿಲ್ಲರ ಖರ್ಚನ್ನೂ, ಕಾರಕೂನರ ಸಂಬಳ, ಇನಾಮು ಅಥವಾ ಮಾಮೂಲು ಅಂಗಡಿಯ ಬಾಡಿಗೆ, ಅಂಗಡಿಯ ಚಿಲ್ಲರ ದುರಸ್ತಿ, ದೀವಳಿಗೆಯ ದೀಪೋತ್ಸವ ಮುಂತಾದವುಗಳಿ ಗೋಸುಗ ಆದ ಖರ್ಚನ್ನು ಇದೇ ಖಾತೆಗೆ ಖರ್ಚು ಹಾಕುವರು.

ಕೆಲವರು ಪರಪೇಟೆಯ ವ್ಯಾಪಾರದ ಇಂಗಿತವನ್ನು ತಿಳಕೊಳ್ಳುವದಕ್ಕಾಗಿ ಮಾಡಿದ ಎಲ್ಲತರದ ಖರ್ಚನ್ನು ಅಂಗಡಿಯ ಖಾತೆಗೆ ಖರ್ಚು ಬರೆಯುವರು.

(೨೩) **ಕೈಗಡ ಹಣದ ಜಮಾಖರ್ಚು:—** (ಅ) ಕೈಗಡ ಕೊಟ್ಟರೆ:— ಹಣ ಒಯ್ದವನ ಹೆಸರಿಲೆ ಖರ್ಚು ಬರೆದು, ತಿರುಗಿ ತಂದುಕೊಟ್ಟಾಗ ಅವನ ಹೆಸರಿಲೆ ಜಮಾ ಹಿಡಿಯುವರು. (ಬ) ಕೈಗಡ ತಂದರೆ:— ಹಣಕೊಟ್ಟವನ ಖಾತೆಗೆ ಜಮಾ ಹಿಡಿದು, ತಿರುಗಿ ಕೊಟ್ಟಾಗ ಅವನ ಖಾತೆಗೆ ಖರ್ಚು ಬರೆಯುವರು.

(೨೪) **ಸಾಲದ ಜಮಾಖರ್ಚು:—** (ಅ) ಸ್ಟಾಂಪು ಇಲ್ಲವೆ ಪ್ರಾಮಿಸರಿ ನೋಟು ಬರೆಸಿಕೊಂಡು ಸಾಲ ಕೊಟ್ಟರೆ:— ಸಾಲ ಕೊಟ್ಟಷ್ಟು ಹಣವನ್ನು ಸಾಲ ಗಾರನ ಖಾತೆಗೆ ಖರ್ಚು ಬರೆದು, ತಪಶೀಲಿನಲ್ಲಿ ಸಾಲದ ಪತ್ರದ ಪ್ರಕಾರವನ್ನು ನೋಂದಣಿ ಮಾಡಿಸಿದ್ದರೆ, ನೋಂದಿನ ನಂಬರು ಹಾಗೂ ತಾರೀಖು ಬರೆಯುವರು; ಸ್ಟಾಂಪು ಕಾಗದಕ್ಕೆ ಜಾಮೀನು ಹಾಕಿಸಿಕೊಂಡಿದ್ದರೆ, ಸಾಲಗಾರನ ಖಾತೆಯಲ್ಲಿ ಜಾಮೀನುದಾರನ ಹೆಸರನ್ನು ಬರೆದಿಡುವರು. ಸಾಲಗಾರನಿಂದ ಗಂಟು, ಬಡ್ಡಿ ಬಂದ ಬಳಿಕ, ಅಸಲನ್ನು ಅವನ ಖಾತೆಗೂ, ಬಡ್ಡಿಯನ್ನು ಬಡ್ಡಿಯ ಖಾತೆಗೂ ಜಮಾ ಹಿಡಿಯುವರು. ಹಾಗೂ ಕಾಗದಕ್ಕೆ ಭರ್ಪಾಯಿ ಹಾಕಿ, ಅದನ್ನು ಸಾಲಗಾರನಿಗೆ ತಿರುಗಿ ಕೊಡುವರು.

(ಬ) **ಸಾಲ ತಂದರೆ:—** ಸಾಲ ತಂದಷ್ಟು ಹಣವನ್ನು ಸಾವುಕಾರನ ಖಾತೆಗೆ ಜಮೆ ಹಿಡಿಯುವರು. ತಪಶೀಲಿನಲ್ಲಿ ಮೇಲೆ ಹೇಳಿದಂತೆ ಬಡ್ಡಿಯ ದರ, ಮುದ್ದತು ಮುಂತಾದವುಗಳನ್ನು ಬರೆಯುವರು ಸಾವುಕಾರನಿಗೆ ಗಂಟು, ಬಡ್ಡೀ ಕೊಟ್ಟ ಬಳಿಕ ಅಸಲನ್ನು ಸಾವುಕಾರನ ಖಾತೆಗೂ, ಬಡ್ಡಿಯನ್ನು ಬಡ್ಡಿಯ ಖಾತೆಗೂ ಖರ್ಚು ಬರೆಯುವರು.

(೨೫) **ಬಂಗಾರ, ಬೆಳ್ಳಿ, ಮುತ್ತುಗಳ ದಾಗೀನುಗಳನ್ನು ಇಲ್ಲವೆ ಬೇರೆ ಬೆಲೆ ಯುಳ್ಳ ಒಡವೆಗಳನ್ನು ಒತ್ತೀ ಇಟ್ಟುಕೊಂಡು ಸಾಲ ಕೊಟ್ಟರೆ:—** ಮೇಲೆ ಹೇಳಿದ ಹಣವನ್ನು ಸಾಲಗಾರನ ಖಾತೆಗೆ ಖರ್ಚು ಹಾಕಿ, ತಪಶೀಲಿನಲ್ಲಿ ಒಡವೆಗಳ ವರ್ಣನೆ ಯನ್ನು ಅಥವಾ ದಾಗೀನುಗಳ ಹೆಸರು, ತೂಕ, ವರ್ಣ, ಅಂದಾಜು ಕಿಮ್ಮತ್ತು ಮುಂತಾ ದವುಗಳನ್ನು ಬರೆಯುವರು. ಹಾಗು ಸಾಲಗಾರನಿಗೆ ದಾಗೀನು ಮುಟ್ಟಿದ ಬಗ್ಗೆ ಪಾವತಿ ಕೊಡುವರು.

ಸಾಲಗಾರನು ಗಂಟು, ಬಡ್ಡಿ ತಂದು ಕೊಟ್ಟ ಬಳಿಕ ಮೇಲೆ ಹೇಳಿದಂತೆ ಅಸಲನ್ನು ಅವನ ಹೆಸರಿಲೆ ಜಮಾ ಹಿಡಿದು, ತಪಶೀಲಿನಲ್ಲಿ ತಿರುಗಿ ಕೊಟ್ಟ ದಾಗೀನುಗಳ ತಪ ಶೀಲು ಬರೆದು, ಅವು ಮುಟ್ಟಿದ ಬಗ್ಗೆ ಸಾಲಗಾರನ ಸಹಿ ತೆಗೆದುಕೊಳ್ಳುವರು. ಕೆಲವು

ಹಣಕೊಟ್ಟು ಕೆಲವು ದಾಗೀನುಗಳನ್ನು ಬಿಡಿಸಿಕೊಂಡರೆ, ಅಷ್ಟರಮಟ್ಟಿಗೆ ಮೇಲೆ ಹೇಳಿದಂತೆ ಜಮಾಖರ್ಚು ಬರೆದು ಪಾವತಿ ತೆಗೆದುಕೊಳ್ಳುವರು.

ಟೀಪು:— ಕೆಲವರು ವತ್ತಿಯ ಒಡವೆಗಳ ಜಮಾಖರ್ಚನ್ನು ಬೇರೊಂದು ವಹಿಯಲ್ಲಿ ಬರೆದಿಡು ವರು. ಆಗ ಕೀರ್ದಿಯಲ್ಲಿ ದಾಗೀನೆಗಳ ತಪಶೀಲು ಬರೆಯದೆ ಅವುಗಳ ವತ್ತಿಯ ವಹಿಯಲ್ಲಿರುವ ಅನುಕ್ರಮ ನಂಬರುಗಳನ್ನು ಮಾತ್ರ ಬರೆಯುವರು.

(೨೬) **ಬಡ್ಡಿಯ ಖಾತೆ:**— ಸಾಲ, ಠೇವು, ಶೆಅರು (ಪಾಲು) ಭಾಂಡವಲು ಮುಂತಾದವುಗಳ ರಕಮುಗಳನ್ನು ಬಳಿಸಿಕೊಂಡ ಬಗ್ಗೆ ಮೂಲ ಗಂಟಿನ ಮೇಲೆ ಕೊಡುವ ಹೆಚ್ಚಿನ ಹಣಕ್ಕೆ ಬಡ್ಡಿ ಅನ್ನುವರು. ಬಡ್ಡಿಯ ಹಣವನ್ನು ಬರೆದಿಡುವ ಖಾತೆಗೆ ಬಡ್ಡಿಯ ಖಾತೆ ಅನ್ನುವರು.

**ಬಡ್ಡಿಯ ಜಮಾಖರ್ಚು:**— ಬಡ್ಡಿಯ ಜಮಾಖರ್ಚನ್ನು ವರ್ಷದ ಕೊನೆಯ ದಿವಸ ಇಲ್ಲವೆ ಕುಳಗಳು ಸಾಲ ತೀರಿಸುವದಕ್ಕೆ ಒಂದ್ದ ದಿವಸ ಮಾಡುವರು. ಸಾಲ ಗಾರನಿಂದ ಬಡ್ಡಿಯ ಹಣವು ವಸೂಲಾದರೆ, ಅದನ್ನು ಬಡ್ಡಿಯ ಖಾತೆಗೆ ಜಮಾ ಹಿಡಿಯುವರು. ತಾವು ಸಾವುಕಾರರಿಗೆ ಬಡ್ಡಿಯ ಹಣವನ್ನು ಕೊಟ್ಟರೆ ಬಡ್ಡಿಯ ಖಾತೆಗೆ ಖರ್ಚು ಹಾಕುವರು.

ತಮಗೆ ಬರತಕ್ಕ ಬಡ್ಡಿಯ ಹಣದಲ್ಲಿ ಸೂಟ ಬಿಟ್ಟರೆ, ಪೂರಾ ಹಣವನ್ನು ಬಡ್ಡಿಯ ಖಾತೆಗೆ ಜಮಾ ಬರೆದು, ಅದರ ತಪಶೀಲಿನಲ್ಲಿ ಸೂಟ ಬಿಟ್ಟ ರಕಮನ್ನು ತೋರಿಸಿ ಅದನ್ನು ಸೂಟಖಾತೆಗೆ ಖರ್ಚು ಹಾಕುವರು.

ಟೀಪು:— ಅಸಲಿನಲ್ಲಿ ಸೂಟ ಬಿಟ್ಟ ಇಲ್ಲವೆ ಸೂಟ ದೊರೆತ ರಕಮಿನ ಜಮಾಖರ್ಚನ್ನು ಮೇಲೆ ಬರೆದಂತೆ ಮಾಡಬೇಕು.

**ಮುದ್ದತು ತುಂಬಿದ ದಿವಸ ಬಡ್ಡಿಯ ಹಣವನ್ನು ಅಸಲಿನಲ್ಲಿ ಕೂಡಿಸುವ ಕರಾರು ಮಾಡಿದಾಗ:**— ಬಡ್ಡಿಯ ರಕಮು ಜಮಾಖರ್ಚಿ ಅಂದರೆ ಪರಭಾರೆ ಯಾಗಿರುತ್ತದೆ. ಆ ಮುದ್ದತಿಗೆ ಆಗುವ ಬಡ್ಡಿಯ ಆಕಾರದ ಜಮಾಖರ್ಚನ್ನು ಕೀರ್ದಿಯಲ್ಲಿ ಬರೆದಿಡದಿದ್ದರೆ, ಅದು ಖಾತೆಯಲ್ಲಿ ಬಾರ ಆಗಲಾರದು. ಆದುದರಿಂದ ಮುದ್ದತು ತುಂಬಿದ ದಿವಸ (ವಾಸ್ತವಿಕವಾಗಿ ಆಗತಕ್ಕ ರಾಸು ತಿಳಿಯಬೇಕೆಂದು) ತಮಗೆ ಬರತಕ್ಕ ಬಡ್ಡಿಯ ಹಣವನ್ನು ಬಡ್ಡಿಯ ಖಾತೆಗೆ (೧೬೭) ಜಮಾ ಹಿಡಿದು ಕುಳಗಳ ಖಾತೆಗಳಿಗೆ (೧೬೩) ಖರ್ಚು ಬರೆಯುವರು. ಹಾಗು ತಾವು ಕೊಡತಕ್ಕ ಬಡ್ಡಿಯ ಹಣವನ್ನು ಬಡ್ಡಿಯ ಖಾತೆಗೆ ಖರ್ಚು ಬರೆದು, ಸಾವುಕಾರನ ಖಾತೆಗೆ ಜಮಾ ಹಿಡಿಯುವರು.

ಟೀಪು:— ಖಾತೆಗಳೊಳಗಿನ ರಕಮುಗಳಿಗೆ ಬಡ್ಡಿಯ ಆಕಾರ ಮಾಡುವ ರೀತಿಯನ್ನು ೬ನೆಯ ಭಾಗದಲ್ಲಿ ನೋಡಿರಿ.

(೨೭) **ಕಮಿಶನ್ ಖಾತೆ:**— ಠೋಕ ವ್ಯಾಪಾರದಲ್ಲಿ ಬೇರೆಯವರಿಂದ ತನಗೆ ದೊರೆತ, ಹಾಗೂ ತಾವು ಗಿರಾಕಿಗಳಿಗೆ ಕೊಟ್ಟ ಕಮಿಶನ್, ವರ್ತಾವಳಿ ಮುಂತಾ-

ದವ್ರುಗಳ ರಕಮುಗಳನ್ನು ಕಮಿಶನ್ ಖಾತೆಗೆ ಬರೆಯುವರು. ಇದಲ್ಲದೆ ನಾಣ್ಯಗಳನ್ನು ಇಲ್ಲವೆ ನೋಟುಗಳನ್ನು ಮುರಿಸುವಾಗ ಮೂಲ ಬೆಲೆಗಿಂತ ಕಡಿಮೆ ಇಲ್ಲವೆ ಹೆಚ್ಚು ದೊರೆತ (ಸೂಟ-ಬಟ್ಟಾದ) ರಕಮುಗಳ ಜಮಾಖರ್ಚನ್ನು ಈ ಖಾತೆಯಲ್ಲಿಯೇ ಬರಕೊಳ್ಳುವರು.

(ಅ) **ತಮಗೆ ಕಮಿಶನ್ ದೊರೆತರೆ:—** ಖರೀದಿ ಮಾಡಿದ ಜೀನಸಿನ ಬೆಲೆಯನ್ನು ಆ ಖಾತೆಗೆ (೬೫) ಖರ್ಚು ಬರೆದು ತಪಶೀಲಿನಲ್ಲಿ ಇಂತಿಷ್ಟು ರೋಖು ಇಂತಿಷ್ಟು ಕಮಿಶನ್ ಎಂದು ಬರೆಯುವರು. ಬಳಿಕ ಕಮಿಶನದ ಹಣವನ್ನು ಕಮಿಶನ್ ಖಾತೆಗೆ (೫೯) ಜಮಾ ಹಿಡಿಯುವರು. (ಬ) **ತಾವು ಗಿರಾಕಿಗಳಿಗೆ ಕಮಿಶನ್ ಕೊಟ್ಟರೆ:—** ವಿಕರಿ ಮಾಡಿದ ಜೀನಸಿನ ಪೂರಾ ಬೆಲೆಯನ್ನು ಆ ಜೀನಸಿನ ಖಾತೆಗೆ (೯೭) ಜಮಾ ಹಿಡಿದು, ತಪಶೀಲಿನಲ್ಲಿ ಇಂತಿಷ್ಟು ರೋಖು, ಇಂತಿಷ್ಟು ಕಮಿಶನ್ ಎಂದು ಬರೆಯುವರು. ಬಳಿಕ ಕಮಿಶನದ ಹಣವನ್ನು ಕಮಿಶನ್ ಖಾತೆಗೆ (೧೦೨) ಖರ್ಚು ಬರೆಯುವರು.

(೨೮) **ನಫಾ ತೋಟಾ ಖಾತೆ:—** ಧಾನ್ಯ, ಬಂಗಾರ, ಚಿಮಣೀ ಎಣ್ಣೆ ಮುಂತಾದ ಪ್ರತಿಯೊಂದು ಜೀನಸಿಗೆ ಬಿದ್ದ ಖರೀದಿಯ ರಕಮಿಗಿಂತ ವಿಕರಿಯ ರಕಮು ಹೆಚ್ಚಾದರೆ, ಅದಕ್ಕೆ ಲಾಭ (ನಫಾ) ಎಂದೂ, ಖರೀದಿಯ ರಕಮಿಗಿಂತ ವಿಕರಿಯ ರಕಮು ಕಡಿಮೆಯಾದರೆ, ಅದಕ್ಕೆ ಹಾನಿ (ತೋಟಾ) ಎಂದೂ ಅನ್ನುವರು. ಲಾಭ ಹಾನಿಗಳ ಹಣವನ್ನು ಬರೆಯುವ ಖಾತೆಗೆ ನಫಾ ತೋಟಾ ಖಾತೆ ಅನ್ನುವರು.

ಯಾವದೊಂದು ಖಾತೆಯಿಂದ ಬಂದ ಲಾಭದ ಹಣವನ್ನು ಆ ಖಾತೆಗೆ ಖರ್ಚು ಹಾಕಿ, ನಫಾ ತೋಟಾ ಖಾತೆಗೆ ಜಮಾ ಹಿಡಿಯುವರು. ಹಾಗು ಹಾನಿಯಾದ ಹಣವನ್ನು (ಆ ಜೀನಸಿನ) ಅದೇ ಖಾತೆಗೆ ಜಮಾ ಹಿಡಿದು ನಫಾ-ತೋಟಾ ಖಾತೆಗೆ ಖರ್ಚು ಬರೆಯುವರು. (ತೋಂಡಮಿಳವಣಿ ಜಮಾಖರ್ಚು ನೋಡಿರಿ.)

(೨೯) **ಕಟ್ಟೆ ಬಾಕಿ ಖಾತೆ:—** ಕಟ್ಟೆ ಗಿರಾಕಿಗಳ ಕಡೆಯಿಂದ ಬರತಕ್ಕ ಬಾಕಿಗಳು ಯಾವ ರೀತಿಯಿಂದಲೂ ವಸೂಲಾಗದಿದ್ದರೆ (ಆ ಬಾಕಿಗಳು ಪೂರಾ ಮುಳುಗಿದವೆಂದು ಖಾತ್ರಿಯಾಗುವ ತನಕ ಆ ರಕಮುಗಳನ್ನು ನಫಾ-ತೋಟಾ ಖಾತೆಗೆ ಜಮಾ-ಖರ್ಚು ಮಾಡಿಕೊಳ್ಳುವದಿಲ್ಲ ಆ ಕುಳಗಳ ಖಾತೆಗಳನ್ನು ಬಾಯಿಗೂಡಿಸಿ ತೆಗೆದು ಹಾಕಿ, ಕಟ್ಟೆಬಾಕಿ ಖಾತೆಯಲ್ಲಿ ಅವರವರ ರಕಮುಗಳನ್ನು ಖರ್ಚು ಹಾಕುವರು. ಮುಂದೆ ಎಂದಾದರೂ ಆ ಕುಳಗಳಿಂದ ಹಣ ವಸೂಲಾದರೆ (ಅವರ ಖಾತೆಗಳನ್ನು ಮೊದಲೇ ತೆಗೆದು ಹಾಕಿದ್ದರಿಂದ) ಅದನ್ನು ಇದೇ ಖಾತೆಗೆ ಜಮಾ ಹಿಡಿಯುವರು.

# ೬ ನೆಯ ಪ್ರಕರಣ

## ಹುಂಡಿಯನ್ನು ಕುರಿತು.

(೧) **ಹುಂಡಿ:**—ಸಾವುಕಾರರು ಒಬ್ಬನ ಕಡೆಯಿಂದ ರೋಖಹಣ ಇಲ್ಲವೆ ಮಾಲು ತೆಗೆದುಕೊಂಡು, ಆ ಬಗ್ಗೆ ತಮ್ಮ ಅಡತದಾರನ ಹೆಸರಿಲೆ ಇಂಥವನಿಗೆ, ಇಲ್ಲವೆ ಈ ಪತ್ರವನ್ನು ತಂದವನಿಗೆ, ಇಂತಿಷ್ಟು ಹಣ ಕೊಡಬೇಕೆಂದು ಬರೆದ ಪತ್ರಕ್ಕೆ ಹುಂಡಿ ಇಲ್ಲವೆ ಹುಂಡೀ ಚೀಟೆಂದೆನ್ನುವರು.

ಸೂಚನೆ:— ಇತ್ತಲಾಗಿ ಕೈಬರಹದ ಹುಂಡೀ ಚೀಟಿಗಳನ್ನು ಕೊಡುವ ರೂಢಿಯು ಕಡಿಮೆಯಾಗಿದೆ. ಸಾವುಕಾರರು ತಾವು ಬರೆಯಬೇಕಾದ ಹುಂಡಿಯ ಚೀಟಿಯ ನಮೂನೆಗಳನ್ನು ಅಚ್ಚು ಹಾಕಿಸಿ, ಪಟ್ಟಿ ಕಟ್ಟಿಸಿ, ಜತನದಿಂದ ಕಾಯುವರು. ಹಾಗು ಅವಶ್ಯವಿದ್ದಾಗ ಆ ನಮೂನೆಗಳ ಮೇಲೆಯೇ ಹುಂಡೀ ಬರೆದು ಕೊಡುವರು. ತಾವು ಬರಕೊಟ್ಟ ಹುಂಡಿಗಳ ಸ್ಥಳಪ್ರತಿಗಳು ತಮ್ಮಲ್ಲಿ ಉಳಿಯುವ ಹಾಗೆ (ಆ ನಮೂನೆಗಳಲ್ಲಿ ಸಹಜವಾಗಿ ಎರಡು ಭಾಗಗಳನ್ನು ಮಾಡಲಿಕ್ಕೆ ಬರುವಂತೆ ಅಚ್ಚು ಹಾಕಿಸಿರುವರು. (ಈ ಪ್ರಕರಣದ ಕೊನೆಗೆ ಇರುವ ಹುಂಡಿಯ ನಮೂನೆಯನ್ನು ನೋಡಿರಿ.)

**ಹುಂಡಿಯ ಉದ್ದೇಶ:**—(ಅ) ಜೀನಸನ್ನು ಕೊಂಡವರಿಗೆ ರಕಮನ್ನು ಕೊಡಲಿಕ್ಕೆ ವೇಳೆಯು ದೊರೆಯಬೇಕು. (ಬ) ಜೀನಸನ್ನು ಮಾರಿದವನಿಗೆ ಬೇಕಾದಾಗ ರಕಮು ಸಿಗಬೇಕು. (ಕ) ಹಣವನ್ನು ಕಳಿಸುವ ಖರ್ಚೂ ಭಯವೂ ಕಡಿಮೆಯಾಗಬೇಕು. (ಡ) ಸಾವುಕಾರನಿಗೆ ತನ್ನ ಹಣವು ಬೇಕಾದಾಗ ದೊರೆಯುವದಲ್ಲದೆ ಬಡ್ಡಿಯೂ ದೊರೆಯಬೇಕು. (ಇ) ನಾಣ್ಯಗಳ ಬಳಿಕೆಯೂ ಕಡಿಮೆಯಾಗಬೇಕು. (ಫ) ಭಾಂಡವಲು ಇಲ್ಲದೆ ವ್ಯಾಪಾರವನ್ನು ಬೇಕಾದಷ್ಟು ಹೆಚ್ಚು ಮಾಡಲಿಕ್ಕೆ ಬರಬೇಕು.

(೨) **ಅಡತ:**— ಯಾವ ಅಂಗಡಿಯಲ್ಲಿ ಹುಂಡಿಯ ಚೀಟಿ ಮತ್ತು ಹುಂಡಿಯ ಹಣ ದೊರೆಯುವುದೋ ಆ ಅಂಗಡಿಗೆ **ಅಡತ** ಅಥವಾ **ಪೇಡಿ** ಅನ್ನುವರು. ಆ ಅಂಗಡಿಯ ಮಾಲಿಕನಿಗೆ **ಅಡತದಾರ** (ಹುಂಡೀ ಸ್ವೀಕರಿಸುವವ) ಅಥವಾ **ಏಜಂಟ** ನೆನ್ನುವರು. ಮತ್ತು ಹುಂಡಿ ಬರೆಯುವವನಿಗೆ ಸಾವುಕಾರನೆಂದೂ ಹಾಗು ಹುಂಡಿಯನ್ನು ಬರೆಯಿಸಿಕೊಳ್ಳುವವನಿಗೆ **ರಾಖಲೆದಾರ** ಇಲ್ಲವೆ ಹುಂಡಿಯ ಧನಿ [ಮಾಲಕ] ಎಂದೂ ಅನ್ನುವರು.

(೩) **ಹುಂಡಾವಳಿ:**— ಹುಂಡೀ ಬರಕೊಡುವ ಸಾವುಕಾರನು ಹುಂಡಿಯ ಹಣದ ಹೊರತು ರಾಖಲೆದಾರನ ಕಡೆಯಿಂದ (ತನಗೆ ಹಣದ ಅಗತ್ಯವಿದ್ದ ಹಾಗೆ) ನೂರಕ್ಕೆ ಕೆಲವು ಹೆಚ್ಚು ಇಲ್ಲವೆ ಕಡಿಮೆ ಹಣ ತೆಗೆದುಕೊಳ್ಳುತ್ತಾನೆ. ಈ ಹಣಕ್ಕೆ ಅನುಕ್ರಮವಾಗಿ **ಹೊರಬಟ್ಟಾ** ಹಾಗು **ಒಳಬಟ್ಟಾ** ಅನ್ನುವರು. ಹಾಗು ಇವೆರಡಕ್ಕೂ ಸಾಮಾನ್ಯವಾಗಿ **ಹುಂಡಾವಳಿ** ಅನ್ನುವರು. ಹುಂಡಾವಳಿಯ ದರವು ಸಾಧಾರಣವಾಗಿ [illegible] ಇರುತ್ತದೆ.

(೪) **ಮೇಲ್ಪತ್ರ:—** ಸಾವುಕಾರರು ಹುಂಡೀ ಬರಕೊಟ್ಟ ಬಳಿಕ ಇಂಥವನ ರಾಖಲೆಯಿಂದ ಇಂತಿಷ್ಟು ರಕಮಿನ (ಶಹಾಜೋಗ ದರ್ಶನಿ ಇಲ್ಲವೆ ತಾವು ಬರೆದವು) ಹುಂಡೀ ಈ ಮಿತಿಯ ದಿವಸ ಬರೆದಿರುವೆವು. ಅದನ್ನು ಸ್ವೀಕರಿಸಬೇಕು ಎಂದು ಅಡತದಾರನಿಗೆ ಒಂದು ಪತ್ರವನ್ನು ಬರೆಯುತ್ತಾರೆ. ಅದಕ್ಕೆ **ಮೇಲ್ಪತ್ರ**ವೆಂದು ಅನ್ನುವರು.

(೫) **ಹುಂಡೀ ಲಾಗೂ ಮಾಡೋಣ:—** ರಾಖಲೆದಾರನು ಅಡತದಾರನಿಗೆ ತನ್ನ ಬಳಿಯಲ್ಲಿರುವ ಹುಂಡಿಯನ್ನು (ತನ್ನ ಗುರ್ತಿನ ಯಾವನೊಬ್ಬ ಅಡತದಾರನ ಮುಖಾಂತರವಾಗಿ) ತೋರಿಸಿ, ಅದರ ಮೇಲೆ "ಲಾಗೂ ಆಯಿತು" ಎಂದು ಬರೆಯಿಸಿ, ಮಿತಿ ಹಾಕಿಸಿ ಅಡತದಾರನ ಸಹಿಮಾಡಿಸಿ, ಅದನ್ನು ತನ್ನ ಸಂಗಡ ಒಯ್ಯುವನು ಇದಕ್ಕೆ ಹುಂಡೀಲಾಗೂ ಮಾಡೋಣವೆನ್ನುವರು. ಹುಂಡೀಲಾಗು ಆದಬಳಿಕ ಅಡತ ದಾರನು ಹುಂಡೀ ಹಣವನ್ನು ಕೊಡಲಿಕ್ಕೆ ಬದ್ಧನಾಗುವನು.

ಸೂಚನೆ:— ವ್ಯವಹಾರಸ್ಥರು ಬಹುತರವಾಗಿ ಶಹಾಜೋಗ ಹುಂಡಿಗಳನ್ನೇ ಬರೆಯಿಸಿಕೊಳ್ಳು ವರು. ಬಳಿಕ ಚೇಚಾಹಾಕಿ, (ಕಲಮು ೮ ಟೀಪು ನೋಡಿರಿ) ತಮ್ಮ ಅಡತದಾರನ ಕಡೆಗೆ ಕಳಿಸು ವರು. ಅವರು ಅದನ್ನು ಹುಂಡಿಯ ಅಡತದಾರನಿಗೆ ಲಾಗೂ ಮಾಡುವರು.

(೬) **ಭರಪಾಯಿ** [ಭರ್ಪಾಯಿ] — ಲಾಗು ಆದ ಹುಂಡಿಯನ್ನು ಸರಳಮಾಡಿ ಕೊಳ್ಳುವ [ಸ್ವೀಕರಿಸುವ]ದಿದ್ದರೆ ಹುಂಡಿಯ ಮುದ್ದತು ತುಂಬಿದ ದಿವಸ ರಾಖಲೆಯು ಇದ್ದ ಸ್ಥಳದಲ್ಲಿ ಅವನಿಗೆ ಹಣವನ್ನು (ತಮ್ಮ ಗುಮಾಸ್ತರ ಮುಖಾಂತರ) ಮುಟ್ಟಿಸಿ, "ಇಂತಿಷ್ಟು ರಕಮು ಮುಟ್ಟಿತು" ಎಂದು ಹುಂಡಿಯ ಮೇಲೆ ಬರೆಯಿಸಿ, ಮಿತಿಹಾಕಿಸಿ, ಅವನ ಸಹಿಮಾಡಿಸುವನು. ಇದಕ್ಕೆ ಭರ್ಪಾಯಿ ಹಾಕಿಸೋಣವೆಂದು ಅನ್ನುವರು.

(೭) **ಖೋಕೆ**— ಭರಪಾಯಿ ಆದ ಹುಂಡಿಗೆ **ಪಕ್ಕಾಹುಂಡೀ** ಇಲ್ಲವೆ ಖೋಕೆ ಎಂದು ಅನ್ನುವರು.

ಅಡತದಾರನು ಅದನ್ನು ಹುಂಡೀ ಬರೆದ ಸಾವುಕಾರನ ಕಡೆಗೆ ಕಳಿಸುವನು. ಸಾವುಕಾರನು ಅದನ್ನು ಹುಂಡಿಯ ಸ್ಥಳಪ್ರತಿಗೆ ಅಂಟಿಸಿ ಇಡುವನು. ಟೀಪು:—ಪಕ್ಕಾ ಹುಂಡಿಗಳನ್ನು ಸಾವುಕಾರರ ಕಡೆಗೆ ಕಳಿಸುವ ಪರಿಪಾಠವು ಈಗ ಕಡಿಮೆಯಾಗಿದೆ. ಹುಂಡೀ ಸಕಾರಿಸಿದ ಬಳಿಕ ಆ ಮಜಕೂರಿನ ಪತ್ರವನ್ನು ಸಾವುಕಾರರಿಗೆ ಕಳಿಸುವರು. ಬಳಿಕ ಸಾವುಕಾರರು ಭರ್ಪಾಯಿಯ ಮಿತಿಯನ್ನು ಹುಂಡಿಯ ಸ್ಥಳಪ್ರತಿಯಲ್ಲಿಯೂ, ಅಡತದಾರನ ಖಾತೆಯಲ್ಲಿಯೂ ಬರೆದಿಡುವರು.

## ಹುಂಡಿಯ ಪ್ರಕಾರಗಳು.

(೮) ಹುಂಡಿಯ ಹಣವನ್ನು ಯಾರು ಇಸಕೊಳ್ಳಬೇಕೆಂಬ ವಿಷಯದಲ್ಲಿ (೧) **ಶಹಾಜೋಗ** (೨) **ಧನಿಜೋಗ** (೩) **ನಾಮಜೋಗ** ಎಂದು ಮೂರು ಪ್ರಕಾರಗಳುಂಟು.

**ಶಹಾಜೋಗ ಹುಂಡಿ**—ಹುಂಡಿಯನ್ನು ಲಾಗು ಮಾಡಿದ ಯೋಗ್ಯ ಮನುಷ್ಯನಿಗೆ

ಟೀಪು:— ಈ ಹುಂಡಿಯನ್ನು ಪರರಿಗೆ ಮಾರಲಿಕ್ಕೆ ಬರುವದು. ಮಾರುವಾಗ ಇಂಥವನಿಗೆ ಈ ಹುಂಡಿಯನ್ನು ಮಾರಿದೆ ಎಂದು ಬರೆದು ಸಹಿ ಮಾಡುವರು. ಈ ಬರಹಕ್ಕೆ "ಶೀಚಾ ಹಾಕೋಣ" ವೆನ್ನುವರು. ವ್ಯವಹಾರಸ್ಥರು ಬಹುತರವಾಗಿ ಶಹಾಜೋಗ ಹುಂಡಿಗಳನ್ನೇ ಬರೆಯುವರು.

**ಧನಿಜೋಗ ಹುಂಡಿ:—** ಹುಂಡಿಯಲ್ಲಿ ಬರೆದ ರಾಖಲೆದಾರನಿಗೆ ಮಾತ್ರ ಹುಂಡಿಯ ಹಣ ಕೊಡಬೇಕೆಂದು ಬರೆದ ಹುಂಡಿಗೆ **ಧನಿಜೋಗ ಹುಂಡಿ** ಯೆನ್ನುವರು.

**ನಾಮುಜೋಗ ಹುಂಡಿ:—** ರಾಖಲೆದಾರನ ಹೊರತು ಹುಂಡಿಯಲ್ಲಿ ಬರೆದ, ಬೇರೊಬ್ಬ ಮನುಷ್ಯನಿಗೆ ಹುಂಡಿಯ ರೂಪಾಯಿಗಳನ್ನು ಕೊಡಬೇಕೆಂದು ಬರೆದ ಹುಂಡಿಗೆ **ನಾಮುಜೋಗ ಹುಂಡಿ**ಯೆನ್ನುವರು.

(೯) ಹುಂಡಿಯ ಹಣ ದೊರೆಯುವ ಮುದ್ದತಿನ ವಿಷಯವಾಗಿ ಹುಂಡಿಯಲ್ಲಿ (೧) **ದರ್ಶನಿ** (೨) **ಮುದ್ದತಿ** (೩) **ಬಂದ ಮುದ್ದತಿ** ಎಂದು ಮೂರು ಪ್ರಕಾರಗಳುಂಟು.

**ದರ್ಶನಿ ಹುಂಡಿ:—** ಹುಂಡಿ ಲಾಗು ಆದ ಕೂಡಲೆ ಅಡತದಾರನು ರಾಖಲೆದಾರನಿಗೆ ಹುಂಡಿಯ ಹಣವನ್ನು ಕೊಡಬೇಕೆಂದು ಬರೆದ ಹುಂಡಿಗೆ **ದರ್ಶನಿ** ಹುಂಡಿ ಅನ್ನುವರು.

**ಮುದ್ದತಿ ಹುಂಡಿ:—** ಹುಂಡಿಯನ್ನು ಲಾಗು ಮಾಡಿದ ಇಂತಿಷ್ಟು ದಿವಸಕ್ಕೆ ಹುಂಡಿಯ ಹಣವನ್ನು ಕೊಡಬೇಕೆಂದು ಬರೆದ ಹುಂಡಿಗೆ **ಮುದ್ದತಿ ಹುಂಡಿ** ಅನ್ನುವರು.

**ಬಂದ ಮುದ್ದತಿ ಹುಂಡಿ:—** ಹುಂಡಿಯನ್ನು ಬರೆದಂದಿನಿಂದ ಇಂತಿಷ್ಟು ದಿವಸಗಳೊಳಗಾಗಿ ಹುಂಡಿಯ ಹಣವನ್ನು ಕೊಡಬೇಕೆಂದು ಬರೆದ ಹುಂಡಿಗೆ **ಬಂದ ಮುದ್ದತಿ ಹುಂಡಿ** ಅನ್ನುವರು.

ಟೀಪು:— (೧) ಮುದ್ದತಿ, ಬಂದ ಮುದ್ದತಿ ಹುಂಡಿಗಳನ್ನು ಸ್ಟಾಂಪಿನ ಮೇಲೆ ಬರೆಯುವರು. ಸ್ಟಾಂಪ ಡ್ಯೂಟಿಯು ನೂರಕ್ಕೆ ೧ ಆಣೆಯಂತೆ ಇರುವದು.

(೨) ಮೊದಲು ಹೇಳಿದ ಶಹಾಜೋಗ, ಧನಿಜೋಗ, ನಾಮುಜೋಗ, ಹುಂಡಿಗಳೊಳಗೆ ಪ್ರತಿಯೊಂದರಲ್ಲಿ ಪುನಃ ದರ್ಶನಿ, ಮುದ್ದತಿ, ಬಂದ ಮುದ್ದತಿ ಎಂದು ಮೂರು ಮೂರು ಪ್ರಕಾರಗಳನ್ನು ಮಾಡಿದರೆ ಒಟ್ಟಿಗೆ ಒಂಬತ್ತು ಪ್ರಕಾರದ ಹುಂಡಿಗಳಾಗುವವು.

(೧೦) **ಪೇಠ ಪರಪೇಠಗಳು—** (ಅ) **ಪೇಠ—** ಭರಪಾಯಿ ಆಗುವದಕ್ಕಿಂತ ಮುಂಚಿತವಾಗಿ ಹುಂಡೀ ಕಳಕೊಂಡರೆ, ಹುಂಡೀ ಬರೆದ ಸಾವುಕಾರನು ರಾಖಲೆದಾರನಿಗೆ ಹುಂಡಿಯ ಹಣ ಮುಟ್ಟಿರುವದಿಲ್ಲವೆಂಬ ಬಗ್ಗೆ ಅಡತದಾರನಿಂದ ಖಾತ್ರಿ ಮಾಡಿಕೊಂಡು, ಮೊದಲಿನ ಹುಂಡಿಯ ನಕಲನ್ನು (ಕೈಬರಹದಿಂದ) ಕೊಡುವನು. ಅದಕ್ಕೆ **ಪೇಠ** ಅನ್ನುವರು. [ಹುಂಡೀ ಕಳೆದುಹೋದ ಸಂಗತಿಯನ್ನೂ ಹಾಗೂ ಮೂಲ ಹುಂಡಿಯ ಹಣ ಕೊಟ್ಟಿದ್ದರೆ ಈ ಪೇಠಿನ ಹಣ ಕೊಡಬಾರದೆಂಬುದನ್ನೂ ಅದರಲ್ಲಿ ಬರೆಯುವರು.]

(ಬ) **ಪರಪೇಠ:—** ಪೇಠ ಕಳಕೊಂಡರೆ ಹುಂಡೀ ಹಾಗು ಪೇಠಗಳ ಹಣವು

ಸೂಚನೆ:—ಗೋಖಲೆ ಗಣಿತ ೩ನೆಯ ಭಾಗದಲ್ಲಿ ಮುರಕೊಳ್ಳುವ ಬಡ್ಡಿಯ ಲೆಕ್ಕಗಳನ್ನು ನೋಡಿರಿ.

ಹುಂಡೀ ಭರಪಾಯಿಯಾಗದೆ (ಖಡಿ) ಉಳಿದಿದ್ದರೆ, ಖಡಿಯಾದಷ್ಟು ದಿವಸಗಳ ಬಡ್ಡಿಯು ಸಾವುಕಾರನಿಂದ ರಾಖಲೆದಾರನಿಗೆ ದೊರೆಯುವದು.

(೧೬) ಸ್ವೀಕರಿಸಿದ ಹುಂಡಿಗಳ ಜಮಾಖರ್ಚನ್ನು ಅಡತದಾರನು ಕೆಳಗೆ ಬರೆದಂತೆ ಮಾಡುವನು.

ದರ್ಶನಿ ಹುಂಡಿಯ ಮಾಲೀಕನಿಗೆ ಹಣಕೊಟ್ಟ ಬಳಿಕ ಸಾವುಕಾರನ ಖಾತೆಗೆ ಖರ್ಚು ( ) ಬರೆದು, ಅವನಿಗೆ ಖೋಕೆ [ಪಕ್ಕಾ ಹುಂಡಿ] ಇಲ್ಲವೆ ಹುಂಡಿ ಸಕಾರಿಸಿದ ಬಗ್ಗೆ ಪತ್ರವನ್ನು ಕಳಿಸುವನು

ಮುದ್ದತಿ, ಬಂದ ಮುದ್ದತಿ ಹುಂಡಿಗಳು ಲಾಗು ಆದ ಕೂಡಲೆ ಹುಂಡಿಯ ಹಣವನ್ನು ಸಾವುಕಾರನ ಖಾತೆಗೆ ( ) ಖರ್ಚು ಬರೆದು, ಹುಂಡಿಯ ಮಾಲೀಕನ ಖಾತೆಗೆ ( ) ಜಮೆ ಹಿಡಿಯುವನು. ಮತ್ತು ಮುದ್ದತು ತುಂಬಿದ ಬಳಿಕ ಮಾಲೀಕನ ಖಾತೆಗೆ ( ) ಖರ್ಚು ಬರೆದು ಹಣ ಮುಟ್ಟಿಸಿ, ಭರಪಾಯಿ ಹಾಕಿಸಿ ಸಾವುಕಾರನಿಗೆ ಖೋಕೆ ಕಳಿಸುವನು.

ಹುಂಡಿಯ ಮುದ್ದತು ಮೀರಿ ಹೆಚ್ಚಾದ ದಿವಸಗಳ ಬಡ್ಡಿಯನ್ನು ಕೊಟ್ಟರೆ ಅದನ್ನು ಬಡ್ಡೀಖಾತೆಗೆ ಖರ್ಚು ಬರೆಯುವರು.

ಉತ್ತಾರವನ್ನು ಮುರಕೊಟ್ಟು ಮುದ್ದತು ತುಂಬುವದರೊಳಗಾಗಿ ಹುಂಡಿಯ ಹಣವನ್ನು ಕೊಟ್ಟರೆ, ಹುಂಡಿಯ ಪೂರಾ ಹಣವನ್ನು ಸಾವುಕಾರನ ಖಾತೆಗೆ ಖರ್ಚು ಬರೆದು, ಪೋಟಶಿಯಲ್ಲಿ ಇಂತಿಷ್ಟು ರೋಖು ಇಂತಿಷ್ಟು ಉತ್ತಾರವೆಂದು ಬರೆದು, ಉತ್ತಾರವನ್ನು ಬಡ್ಡೀ ಖಾತೆಗೆ ಜಮೆ ಹಿಡಿಯುವರು.

(೧೭) ಹುಂಡೀ ನಾಕರಿಸುವ ಕಾರಣಗಳು:—

(೧) ಸಾವುಕಾರನಿಂದ ಮೇಲ್ಪತ್ರ ಬರದಿದ್ದರೆ,

(೨) ಸಾವುಕಾರನಾಗಲಿ, ರಾಖಲೆದಾರನಾಗಲಿ ಶಹಾಜೋಗ* ಸಿಗದಿದ್ದರೆ

(ಅಡತೆದಾರನು ಹುಂಡೀ ಲಾಗುಮಾಡಿಕೊಳ್ಳುವದಿಲ್ಲ. ಒಂದು ವೇಳೆ ಹುಂಡೀ ಲಾಗು ಮಾಡಿಕೊಂಡು "ಹುಂಡೀ ಖಡೀ" ಎಂದು ಕೂಡಲೆ ಸಾವುಕಾರನಿಗೆ ತಿಳಿಸುವನು, ಮತ್ತು ಮುದ್ದತು ತುಂಬಿದ ಬಳಿಕ ಹುಂಡೀ ನಾಕರಿಸುವನು.)

---

*ಸಾವುಕಾರನ ಖಾತೆಯು ಸರಳವಾಗಿದ್ದರೆ, ಅಂದರೆ ಹುಂಡೀಸ್ವೀಕರಿಸುವದಕ್ಕೆ ಸಾಕಷ್ಟು ಚಿಲೆಯ ಮಾಲು ಇಲ್ಲವೆ ರೋಖು ಹಣವು ಸಾವುಕಾರನಿಂದ ಬಂದಿದ್ದರೆ, ಅಥವಾ ಬೇರೊಂದು ಅಡತಿಯ ಮೇಲೆ ಪಟಾಯಿಸಲಿಕ್ಕೆ ಬರುವಂಥ ಹುಂಡಿಯು ಸಾವುಕಾರನ ರಾಖಲೆಯಿಂದ ಬಂದಿದ್ದರೆ "ಸಾವುಕಾರನು ಶಹಾಜೋಗ" ನೆನಿಸುವನು.

"ರಾಖಲೆದಾರನು ಯಾವದೊಂದು ಅಡತಿ ಅಂಗಡಿಯ ಮುಖಾಂತರ ಹುಂಡೀ ಲಾಗುಮಾಡಿದರೆ ಅವನು ಶಹಾಜೋಗನಾಗುವನು.

(೩) ಹುಂಡಿ ಭರಪಾಯಿ ಆಗುವ ಮೊದಲೇ ರಾಖಲೆದಾರನಿಗೆ ಹುಂಡಿಯ ಹಣ ಕೊಡಕೂಡದೆಂದು ಸಾವುಕಾರನಿಂದ ಮನಾಯಿ ಪತ್ರ ಬಂದರೆ,

(೪) ಸಾವುಕಾರನು ದಿವಾಳಿ ತೆಗೆದ ವರ್ತಮಾನ ಬಂದರೆ,

(೫) ಅಡತದಾರನು ತಾನೇ ದಿವಾಳಿ ತೆಗೆದರೆ.

(೧೮) **ನಾಕರಿಸಿದ ಹುಂಡಿಗಳು:—** ಹುಂಡೀ ನಾಕರಿಸಿದ ಕಾರಣವನ್ನು ಅಡತದಾರನು ಹುಂಡಿಯಮೇಲೆ ಬರೆಯುವದಿಲ್ಲ. ನಾಕರಿಸಿದ ಹುಂಡಿಯನ್ನು, ರಾಖಲೆದಾರನು ಪ್ರೋಟೇಸ ಮಾಡಿಸದೆ ಹಾಗೇ ಸಾವುಕಾರನ ಕಡೆಗೆ ಕಳಿಸಬಹುದು.

[illegible] ಹುಂಡೀ ಮಾಡಿಸಿ

(ಪದ್ಧತಿ)

ನಂ. ........ ತಾ. ........

**New Karnatak[illegible]pany Ltd., Bombay**

**ನ್ಯೂ ಕರ್ನಾಟಕ** ಲಿಮಿಟೆಡ್, ಮುಂಬಯಿ

ಯಾರ ಮೇಲೆ ________ ಇವರಿಗೆ

ರಾಖಲೆ ______ ಸ ರಾ. ರಾ. ________ ಇವರ

ರೂ. ( ) ಅಕ್ಷರ ________ ಗಳಿಗೆ ದರ್ಶನೀ

ಡಲೇ ಹುಂಡೀ ತಂದವರ ಸರಳ ವರ್ತನ, ಸ್ಥಳ, ಪತ್ತೆ

ತಾ. ______ ಕೊಂಡು ರೂ. ಗಳನ್ನು ಕೊಟ್ಟು ಹುಂಡಿಯ ಮೇಲೆ

ದಸ್ತೂರ ______ ಮಿತಿ ______ ಶಕೆ ______

ದಸ್ತೂರ ______

**ರೂ.** ______ ಸಹಿ ______

ಯ ಹಣ ... ಲೆದಾರನಿಗೆ ... ಮಾಡಿ ... ವೇ ಇದು ... ಹುಂಡಿಯ ... ಗೆ ಜಮಾ ... ಖಲೆದಾರ ... ಖಲೆದಾರ ... ದಿ ಏಕರಿ ... ಖಲೆದಾರನ ... -ನಕ್ರಾಯಿ ... ಖಾತೆಗಳಿಗೆ ... ಕ ಅವನ

ಸಕ್ರಾಯಿ-ನಕ್ರಾ[illegible] ಆಯಾ ಪೇಟೆಗ[illegible]ವರು.

(೨೦) **ಹುಂಡಿಯ ಒಳಭೇದಗಳು:—** ಮೇಲೆ ಹೇಳಿದ[illegible]ಲ್ಲದೆ ನಿಶಾಣೀ ಜೋಗ (ನಿಶಾನಜೋಗ), ಜವಾಬಿ, ಲಹಣಿ, ಘಟ್ಟಿಹುಂಡಿ (ಪ್ರಾಮಿಸರಿ ನೋಟು) ಮುಂತಾದವು ಹುಂಡಿಗಳ ಒಳಭೇದಗಳಾಗಿರುವವು, ಹಾಗು ಚೆಕ್ (ವರಾತ) ಕರನ್ಸಿ ನೋಟು ಮುಂತಾದವು ಹುಂಡಿಯ ರೂಪಾಂತರಗಳಾಗಿರುವವು.

(೨೧) **ನಿಶಾಣೀ ಜೋಗ ಹುಂಡಿ:—** (೧) ಧನಿಜೋಗ, ಇಲ್ಲವೆ ನಾಮಜೋಗ ಹುಂಡಿಯ ಮಾಲಿಕನ ಪರಿಚಯದ ಅಡತದಾರರು ಹುಂಡಿಯಲ್ಲಿ ಬರೆದಿರುವ ಅಡತ

ದಾರನ ಊರಲ್ಲಿ ಇಲ್ಲದಾಗ, ಹುಂಡಿಯ ಮಾಲಕನ ಗುರುತು ಹತ್ತುವದರ ಸಲುವಾಗಿ ರಾಖಲೆದಾರನ ಕೈಯಲ್ಲಿ ಸಾವುಕಾರನು ತನ್ನ ಅಡತದಾರನಿಗೆ ಒಂದು ಪತ್ರವನ್ನು ಕೊಡುವನು. ಈ ಪತ್ರವನ್ನು ನೋಡಿಕೊಂಡು ಅಡತದಾರನು ಅವನ ಬಳಿಯಲ್ಲಿರುವ ಹುಂಡಿಯ ಹಣವನ್ನು ಕೊಡುವನು. ಆದ್ದರಿಂದ ಆ ಹುಂಡಿಗೆ **ನಿಶಾಣೀ ಜೋಗ** ಹುಂಡಿಯನ್ನುವರು. (ಈ ಹುಂಡಿಗೆ ನಿಶಾಜೋಗ ಹುಂಡಿ ಎಂದು ಕೆಲವರು ಅನ್ನುವರು.)

(ಅ) "ತಾನು ಕೊಡತಕ್ಕಬಾಕಿಯನ್ನು ತನ್ನ ಅಡತದಾರನ ಮೇಲೆ ಹುಂಡೀ ಬರೆದು ತೆಗೆದುಕೊಳ್ಳಬೇಕೆಂದು" ಗಿರಾಕಿಯು ಬರೆದ ಪತ್ರದ ಪ್ರಕಾರ ವ್ಯವಹಾರಸ್ಥರು ತಮ್ಮ ಅಡತದಾರನ ರಾಖಲೆಯಿಂದ, ಗಿರಾಕಿಯ ಅಡತದಾರನ ಮೇಲೆ ಬರೆದ ಹುಂಡಿಗೆ ನಿಶಾಣೀ ಜೋಗ ಹುಂಡಿ ಅನ್ನುವರು. ಈ ಹುಂಡಿಯಲ್ಲಿ ಗಿರಾಕಿಯ ಹೆಸರು, ಅವನ ಪತ್ರದ ಮಿತಿ ಮುಂತಾದವುಗಳನ್ನು ಹುಂಡಿಯ ನಮೂನೆಯಲ್ಲಿರುವ ನಿಶಾಣೀ— ಎಂಬ ಶಬ್ದದ ಮುಂದೆ ಬರೆಯುವರು.

ಉದಾ:— ಬಾರ್ಸಿಯ ವ್ಯಾಪಾರಸ್ಥನ ಬಳಿಯಲ್ಲಿ ನಾವು ವ್ಯಾಪಾರ ಮಾಡಿ, ನಮ್ಮಿಂದ ಬರತಕ್ಕ ಬಾಕಿಯನ್ನು ಸೊಲ್ಲಾಪೂರದಲ್ಲಿದ್ದ ನಮ್ಮ ಅಡತದಾರನ ಮೇಲೆ ಹುಂಡೀ ಬರೆದು ವಸೂಲ ಮಾಡಿಕೊಳ್ಳಬೇಕೆಂದು ನಾವು ಅವನಿಗೆ ತಿಳಿಸಿದರೆ, ಬಾರ್ಸಿಯ ವ್ಯಾಪಾರಸ್ಥನು ಸೊಲ್ಲಾಪೂರದಲ್ಲಿದ್ದ ತನ್ನ ಅಡತದಾರನ ರಾಖಲೆಯಿಂದ ನಮ್ಮ ಅಡತದಾರನ ಮೇಲೆ ಹುಂಡೀ ಬರೆಯುವನು. ಆ ಹುಂಡಿಯಲ್ಲಿ ನಮ್ಮ ಹೆಸರನ್ನೂ ಹಾಗೂ ಪತ್ರದ ಮಿತಿಯನ್ನೂ ಬರೆಯುವನು.

(ಆ) **ಜವಾಬಿ ಹುಂಡಿ**:— ಇಂಥವನಿಗೆ ಹಣ ಮುಟ್ಟಿಸಿ ಆ ಬಗ್ಗೆ ಪಾವತಿ ತರಿಸಿಕೊಡಬೇಕೆಂದು ರಾಖಲೆದಾರನು ಸಾವುಕಾರನಿಂದ ಬರಿಸಿದ ನಾಮಜೋಗ ಹುಂಡಿಗೆ **ಜವಾಬಿ ಹುಂಡಿ**ಯನ್ನುವರು. ಈ ಹುಂಡಿಯ ಸಂಬಂಧದಿಂದ ತನಗೆ ಮುಟ್ಟಿದ ಹಣದ ಬಗ್ಗೆ ಸಾವುಕಾರನು ರಾಖಲೆದಾರನಿಗೆ ಪಾವತಿಕೊಟ್ಟು, ಹುಂಡಿಯನ್ನು ತಾನೇ ಪರಸ್ಪರ ಅಡತದಾರನಿಗೆ ಕಳಿಸುವನು. ಅವನು ಹುಂಡಿಯಲ್ಲಿ ಬರೆದ ಇಸಮಿಗೆ ಹಣ ಮುಟ್ಟಿಸಿ ಅವನ ಪಾವತಿ ತೆಗೆದುಕೊಂಡು ಅದನ್ನು ಹುಂಡೀ ಬರೆದ ಸಾವುಕಾರನಿಗೆ ಕಳಿಸುವನು. ಅಡತದಾರನಿಂದ ಪಾವತಿ ಬಂದ ಬಳಿಕ ಸಾವುಕಾರನು ಅದನ್ನು ರಾಖಲೆಗೆ ಕೊಡುವನು

**ಟೀಪು**:— ಪೋಷ್ಟ ಆಫೀಸಿನಲ್ಲಿ ನಾವು ಮಾಡುವ ಮನಿಆರ್ಡರುಗಳು (ನಾಮಜೋಗ) ಜವಾಬಿ ಹುಂಡಿಗಳಾಗಿರುವವು.

(ಇ) **ಘಟ್ಟಿ ಹುಂಡಿ (ಪ್ರಾಮಿಸರಿ ನೋಟು)**:— ರೋಖು ಸಾಲ ತೆಗೆದುಕೊಂಡ ಹಣವನ್ನು "ನೀವು ಬೇಡಿದ ಕೂಡಲೆ ಕೊಡುವೆನು" ಎಂದು ಸಾಲಗಾರನು ಸಾವುಕಾರ (ಧನಕೋ) ನಿಗೆ ಬರಕೊಟ್ಟ ವಚನಬದ್ಧ ಪತ್ರಕ್ಕೆ ಪ್ರಾಮಿಸರಿ ನೋಟು ಅನ್ನುವರು. ಈ ಪತ್ರಕ್ಕೆ ಯೋಗ್ಯ ಟಿಕೀಟು ಹಚ್ಚಿ ಅದರ ಮೇಲೆ ಸಾಲಗಾರನು ತನ್ನ ಸಹಿಮಾಡುವನು. (ಪ್ರಾಮಿಸರಿ ನೋಟಿಗೆ ಸಾಕ್ಷಿಯು ಅವಶ್ಯಕತೆ ಇಲ್ಲ. ಇದರಲ್ಲಿ ಬಡ್ಡಿಯ ದರವನ್ನು ಬರೆಯುವರು.)

ಪ್ರಾಮಿಸರಿ ನೋಟು ಬರಕೊಡುವ ಸಾಲಗಾರನು ಹುಂಡೀ ಬರೆದ ಸಾವುಕಾರನೂ, ಹುಂಡಿ ಸಕಾರಿಸುವ ಅಡತದಾರನೂ ಆಗುವನು. ಪ್ರಾಮಿಸರಿ ನೋಟು ಬರೆಸಿಕೊಳ್ಳುವ ಧನಕೋನು ರಾಖಿತೆದಾರನಾಗುವನು. ಹಾಗು ನೋಟಿನ ಹಣವು ಬೇಡಿದ ಕೂಡಲೆ ದೊರೆಯುವದು. ಅದ್ದರಿಂದ ಅದು ದರ್ಶನಿ ಹುಂಡಿಯಾಗಿರುವದು. ಪ್ರಾಮಿಸರಿ ನೋಟುಗಳನ್ನು ಶಹಾಜೋಗ ಹುಂಡಿಗಳಂತೆ ವಿಕ್ರಿ ಮಾಡಲಿಕ್ಕೆ ಬರುವದು. ವಿಕ್ರಿ ಮಾಡುವವನು ಈ ನೋಟಿನ ರಕಮನ್ನು ಇಂಥವನಿಗೆ ಕೊಡಬೇಕು ಎಂದು ಬರೆದು ಸಹಿ ಮಾಡಬೇಕು.

ಸಾರಾಂಶ:— ಸಾವುಕಾರನ ರಾಖಿತೆಯಿಂದ ಸಾಲಗಾರನು ತನ್ನ ಮೇಲೆ ತಾನೇ ಬರಕೊಂಡ ಶಹಾಜೋಗ ...

ನಂ. ______ ತಾ. ______

ರಾ. ರಾ. ______

ರೇಟಿವ್ಹ ಬ್ಯಾಂಕ ಲಿಮಿಟೆಡ್,

ತ್ರ.

ತಂದವರಿಗೆ ಅಥವಾ ಇಂಥವರಿಗೆ

ರೂ. ______

ಕೊಡಬೇಕು.

ಸಹಿ

ಬರೆದ ಧನಿ ... ಲ್ಲವೆ ಮಾಲು ... ಬರುವಂತೆ ... ಗೆ ಮುದ್ದತಿ ... ಕ್ಕೆ ಸಾಕಷ್ಟು ... ಬೇರೊಬ್ಬ ... ಕಮ್ಮ ಸರ ... ನೋಟು) ... ವಿರುವದಿಲ್ಲ. ... ತೆಗೆಯಲಿಕ್ಕೆ ... ಮಜೋಗ—

ಸೂಚನೆಗಳು:— ... ಕೊಟ್ಟರೆ ಅದು **ಬೇರರ ಚೆಕ್ಕು** ಆಗುವದು. (೨) ರಾ. ರಾ. ಎಂಬಲ್ಲಿ ಹೆಸರು ಬರೆದು ತಂದವರಿಗೆ ಎಂಬವನ್ನು ಕಾಟು ಹೊಡೆದು ಚೆಕ್ಕು ಬರೆದು ಕೊಟ್ಟರೆ ಅದು **ಆರ್ಡರ ಚೆಕ್ಕು** ಆಗುವದು. (೩) ರಾ. ರಾ. ಎಂಬಲ್ಲಿ ಹೆಸರು ಬರೆದು ಆರ್ಡರ ಇಲ್ಲವೆ ಬೇರರ ಚೆಕ್ಕು ಮಾಡಿ ಕ್ರಾಸ ಮಾಡಿ (ಎರಡು ಗೆರೆ ಹೊಡೆದು) ಕೊಟ್ಟರೆ ಅದು **ಕ್ರಾಸ್ಡ ಚೆಕ್ಕು** ಆಗುವದು. ಕ್ರಾಸ್ಡ ಚೆಕ್ಕಿನಿಂದ ರೋಖ ಹಣವು ಆಗುವದಿಲ್ಲ, ಚೆಕ್ಕು ತಂದವನ ಖಾತೆಗೆ ಆ ಹಣವು ಜಮಾ ಆಗುವದು. ಕ್ರಾಸ್ಡ ಚೆಕ್ಕಿನ ಹಣವು ಎರಡನೆಯ ಬ್ಯಾಂಕಿನ ಮುಖಾಂತರ ಬರತಕ್ಕದ್ದು ಎಂದು ತಿಳಿಯಬೇಕು.

# ೭ನೆಯ ಪ್ರಕರಣ

---

## ತೇರೀಜುಗಳನ್ನು ಕುರಿತು

**ಕೀರ್ದಿಯ ತಿಂಗಳ ತೇರೀಜು:—** (ಕೀರ್ದಿಯೊಳಗಿನ ಯಾವದೊಂದು ಮಾಸದ ತೇರೀಜು ನೋಡಿರಿ.)

೧. **ಮೇಲ್ವಿಳಾಸ:—** ಮೊದಲಿಗೆ (ಬೀತವಳಿಯಾಗುವಂತೆ) **ಕೀರ್ದಿಯ ತಿಂಗಳ ತೇರೀಜು** ಎಂದು ಬರೆಯುವರು.

೨. **ಮುದ್ದತು:—** ಅದರ ಕೆಳಗೆ ತಿಂಗಳ [ಮಾಸದ] ಹೆಸರು, ಶಕೆಗಳನ್ನು ಬೀತ ವಳಿಯಾಗುವಂತೆ ಬರೆಯುವರು.

೩. **ರಕಮುಗಳ ಸ್ಥಳ:—** ಖರ್ಚಿನ ಸದರುಗಳ ಮೊದಲಿನ ಎರಡು ರಕಾನೆಗಳಲ್ಲಿ ಜಮಾ ______ ರೂ. ಅದರ ಮುಂದೆ, ಕಡೆಯ ಎರಡು ರಕಾನೆಗಳಲ್ಲಿ ಖರ್ಚು ______ ರೂ. ಎಂದು ಬರೆಯುವರು.

೪. **ಕ್ರಮವಾರ ಮಿತಿ:—** ಬಳಿಕ ಜಮೆಯ ಸದರುಗಳಲ್ಲಿ ಕೀರ್ದಿ ನಡೆದ ಮಿತಿಗಳನ್ನು ಕ್ರಮವಾಗಿ ಒಂದರ ಕೆಳಗೊಂದು ಬರೆಯುವರು.

೫. **ರಕಮುಗಳ ಅಂಕಿ:—** ಪ್ರತಿಯೊಂದು ಮಿತಿಯ ಮುಂದೆ, ಕೀರ್ದಿಯೊಳಗಿನ ಆ ಮಿತಿಯ ಜಮಾ ಹಾಗೂ ಖರ್ಚಿನ ಬೇರೀಜುಗಳನ್ನು ಬೇರೆ ಬೇರೆಯಾಗಿ ಬರೆಯುವರು.

೬. **ಬೇರೀಜು:—** ಬಳಿಕ ಜಮೆಯ ರಕಮುಗಳನ್ನೂ, ಖರ್ಚಿನ ರಕಮುಗಳನ್ನೂ ಬೇರೆ ಬೇರೆ ಕೂಡಿಸಿ, ಬಂದ ಬೇರೀಜುಗಳನ್ನು ಆಯಾ ರಕಮುಗಳ ಬುಡದಲ್ಲಿ ಆ ರಕಾನೆಯಷ್ಟೇ ಗೆರೆಯ ಕೆಳಗೆ ಬರೆಯುವರು.

೭. **ಶಿಲಕಿನ ಅಂಕಿ:—** ತರುವಾಯ ಜಮೆಯ ಬೇರೀಜಿನ ಕೆಳಗೆ ತಿಂಗಳ ಆರಂಭದ ಶಿಲಕನ್ನು, ಖರ್ಚಿನ ಬೇರೀಜಿನ ಕೆಳಗೆ ತಿಂಗಳ ಕೊನೆಯ ಶಿಲಕನ್ನು ಬರೆಯುವರು. (ತಿಂಗಳ ಆರಂಭದ ಶಿಲಕನ್ನು ಮಿತಿ ಬರಕೊಳ್ಳುವ ಮೊದಲು ಕೆಲವರು ಬರಕೊಳ್ಳುವರು.)

**ಅಂತು ಬೇರೀಜು:—** ಜಮೆಯ ಬೇರೀಜಿನಲ್ಲಿ ತಿಂಗಳ ಆರಂಭದ ಶಿಲಕನ್ನು, ಹಾಗು ಖರ್ಚಿನ ಬೇರೀಜಿನಲ್ಲಿ ತಿಂಗಳ ಕೊನೆಯ ಶಿಲಕನ್ನು ಕೂಡಿಸುವರು. ಇವೆರಡು ಬೇರೀಜುಗಳು ಸರಿಯಾದರೆ ತಿಂಗಳ ಜಮಾಖರ್ಚು ಸರಿಯಾಗಿದೆ ಎಂದು ತಿಳಿಯುವರು

**ಖತಾವಣಿಯ ತಿಂಗಳ ತೇರೀಜು:—** (ಕೀರ್ದಿಯೊಳಗಿನ ಯಾವದೊಂದು. ಮಾಸದ ತೇರೀಜು ನೋಡಿರಿ.)

೧. **ಮೇಲ್ವಿಳಾಸ :—** ಮೊದಲು ಖತಾವಣಿಯ **ತಿಂಗಳ ತೇರೀಜು** ಎಂದು ಬೀತವಳಿಯಾಗುವಂತೆ ಬರೆಯುವರು.

೨. **ಮುದ್ದತು :—** ಅದರ ಕೆಳಗೆ ತಿಂಗಳ ( ಮಾಸದ ) ಹೆಸರು ಶಕೆಗಳನ್ನು ಬೀತವಳಿಯಾಗುವಂತೆ ಬರೆಯುವರು.

೩. **ರಕಮುಗಳ ಸ್ಥಳ :—** ಖರ್ಚಿನ ಸದರುಗಳ ಮೊದಲಿನ ಎರಡು ರಕಾನೆಗಳಲ್ಲಿ ಜಮಾ ರೂ. ಕಡೆಯ ಎರಡು ರಕಾನೆಗಳಲ್ಲಿ ಖರ್ಚು ರೂ. ಎಂದು ಬರೆಯುವರು.

೪. **ಕ್ರಮವಾಗಿ ಖಾತೆಗಳು:—** ಜಮೆಯ ಸದರುಗಳಲ್ಲಿ ಕ್ರಮವಾಗಿ ಖಾತೆಗಳ ( ಆ ತಿಂಗಳಲ್ಲಿ ವ್ಯವಹಾರ ನಡೆದ ಖಾತೆಗಳನ್ನು ಮಾತ್ರ ) ಹೆಸರುಗಳನ್ನು ಬರೆಯುವರು.

೫. **ರಕಮುಗಳ ಅಂಕಿ :—** ಪ್ರತಿಯೊಂದು ಖಾತೆಯ ಮುಂದೆ ಆ ತಿಂಗಳಲ್ಲಿ ಆಯಾ ಖಾತೆಗಳೊಳಗೆ ಬಾಬ ಆದ ಜಮಾ ಹಾಗು ಖರ್ಚಿನ ರಕಮುಗಳ ಬೇರೀಜುಗಳನ್ನು ಬರೆಯುವರು.

೬. **ಬೇರೀಜು :—** ಜಮೆಯ ಕಡೆಯ ರಕಮುಗಳನ್ನು ಒಟ್ಟುಗೂಡಿಸಿ, ಆ ರಕಾನೆಯ ಪಟ್ಟೀ ಗೆರೆಯ ಕೆಳಗೆ ಮತ್ತು ಖರ್ಚಿನ ರಕಮುಗಳನ್ನು ಒಟ್ಟುಗೂಡಿಸಿ, ಆ ರಕಾನೆಯ ಪಟ್ಟೀ ಗೆರೆಯ ಕೆಳಗೆ ಬರೆಯುವರು. ಈ ಬೇರೀಜುಗಳು ಕೀರ್ದಿಯ ತಿಂಗಳ ತೇರೀಜಿಗೆ ( ತಿಂಗಳ ಆರಂಭದ ಹಾಗು ಕೊನೆಯ ಶಿಲಕು ಬಿಟ್ಟು ) ಸರಿಯಾದರೆ ಕೀರ್ದಿಯೊಳಗಿನ ರಕಮುಗಳೆಲ್ಲ ಖತಾವಣಿಯಲ್ಲಿ ಬಾಬ ಮಾಡಲ್ಪಟ್ಟವೆಂದು ತಿಳಿಯಬೇಕು.

೭. ಹಾಗು ೮ **ಶಿಲಕಿನ ಅಂಕಿ** ಹಾಗು **ಅಂತು ಬೇರೀಜುಗಳು** ಕೀರ್ದಿಯ ತೇರೀಜಿನಂತೆ.

ಸೂಚನೆ:— ಕೀರ್ದಿಯ ತಿಂಗಳ ತೇರೀಜುಗಳನ್ನೂ ಖತಾವಣಿಯ ತಿಂಗಳ ತೇರೀಜುಗಳನ್ನೂ ಕೀರ್ದಿಯಲ್ಲಿ ಬರೆಯುವರು. ಈ ಪ್ರಕಾರ ಕೀರ್ದಿ ಖಾತೆಗಳ ಬೇರೀಜುಗಳ ಮೇಳ ನೋಡುವ ವಕ್ಕೆ " ತಿಂಗಳ ಅಖಾಡ " ಅನ್ನುವರು.

**ಕೀರ್ದಿಯ ಹನ್ನೆರಡು ತಿಂಗಳ (ಬಾರ ಮಾಹಿ) ತೇರೀಜು**— ( ಕೀರ್ದಿಪಾನು ೪೦ ನೋಡಿರಿ. )

೧. **ಮೇಲ್ವಿಳಾಸ :—** ಮೊದಲು **ಕೀರ್ದಿಯ ಹನ್ನೆರಡು ತಿಂಗಳ ತೇರೀಜು** ಎಂದು ಬೀತವಳಿಯಾಗುವಂತೆ ಬರೆಯುವರು.

೨. **ಮುದ್ದತು :—** ಅದರ ಕೆಳಗೆ ಈ ಮಿತಿಯಿಂದ ಈ ಮಿತಿಯವರೆಗೆ ಎಂದು ಬರೆಯುವರು.

೩. **ರಕಮುಗಳ ಸ್ಥಳ :—** ಕೀರ್ದಿಯೊಳಗಿನ ಖರ್ಚಿನ ಸದರುಗಳ ಮೊದಲಿನ ಎರಡು ರಕಾನೆಗಳಲ್ಲಿ ಜಮಾ ರೂ. ಹಾಗು ಕಡೆಯ ಎರಡು ರಕಾನೆಗಳಲ್ಲಿ ಖರ್ಚು ರೂ. ಎಂದು ಬರೆಯುವರು

೪. **ಕ್ರಮವಾರ ತಿಂಗಳ :—** ಜಮೆಯ ಕ್ರಮವಾಗಿ ಒಂದರ ಕೆಳಗೊಂದು ಬರೆಯುವರು.

೫. **ರಕಮುಗಳ ಅಂಕಿ** :— ಪ್ರತಿಯೊಂದು ತಿಂಗಳ ಮುಂದೆ ಆಯಾ ತಿಂಗಳು ಗಳ ತೇರೀಜಿನೊಳಗಿನ ( ತಿಂಗಳ ಆರಂಭದ ಹಾಗು ತಿಂಗಳ ಕೊನೆಯ ಶಿಲಕು ಬಿಟ್ಟು) ಜಮಾ ಹಾಗು ಖರ್ಚಿನ ರಕಮುಗಳನ್ನು ಬರೆಯುವರು.

೬. **ಬೇರೀಜು** :— ಜಮೆಯ ರಕಮುಗಳನ್ನು ಕೂಡಿಸಿ ಆ ರಕಾನೆಯಷ್ಟೇ ಗೆರೆಯ ಕೆಳಗೆ, ಮತ್ತು ಖರ್ಚಿನ ರಕಮುಗಳನ್ನು ಕೂಡಿಸಿ ಆ ರಕಾನೆಯಷ್ಟೇ ಗೆರೆಯ ಕೆಳಗೆ ಬರೆಯುವರು.

೭. **ಶಿಲಕಿನ ಅಂಕಿ ೮. ಅಂತುಬೇರೀಜು** :—ಜಮೆಯ ಬೇರೀಜಿನಲ್ಲಿ ವರ್ಷದ ಆರಂಭದ ರೋಖು ಶಿಲಕನ್ನೂ ಖರ್ಚಿನ ಬೇರೀಜಿನಲ್ಲಿ ವರ್ಷದ ಕೊನೆಯ ರೋಖು ಶಿಲಕನ್ನೂ ಕೂಡಿಸುವರು.

ಇವೆರಡೂ ಬೇರೀಜುಗಳು ಸರಿಯಾದರೆ ವರ್ಷದ ಜಮಾಖರ್ಚು ಸರಿಯಾಯಿ ತೆಂದು ತಿಳಿಯುವರು.

**ಖತಾವಣಿಯ ಹನ್ನೆರಡು ತಿಂಗಳ (ಬಾರ ಮಾಹೆ) ತೇರೀಜು** (ಕೀರ್ದಿಪಾನ ೪೦-೪೧ ನೋಡಿರಿ. )

೧. **ಮೋಲ್ಸಿಳಾಸ** :— ಮೊದಲು ಖತಾವಣಿಯ ಹನ್ನೆರಡು ತಿಂಗಳ ತೇರೀಜು ಎಂದು ಬೀತವಳಿಯಾಗುವಂತೆ ಬರೆಯುವರು.

೨. **ಮುದ್ದತು** :— ಅದರ ಕೆಳಗೆ ಈ ಮಿತಿಯಿಂದ ಈ ಮಿತಿಯವರೆಗೆ ಎಂದು ಬರೆಯುವರು.

೩. **ರಕಮುಗಳ ಸ್ಥಳ** :— ಕೀರ್ದಿಯೊಳಗಿನ ಖರ್ಚಿನ ಸದರುಗಳ ಮೊದಲಿನ ಎರಡು ರಕಾನೆಗಳಲ್ಲಿ ಜಮಾ________ರೂ. ಕಡೆಯ ಎರಡು ರಕಾನೆಗಳಲ್ಲಿ ಖರ್ಚು________ರೂ. ಎಂದು ಬರೆಯುವರು.

೪. **ಕ್ರಮವಾಗಿ ಖಾತೆ**:— ಬಳಿಕ ಜಮೆಯ ಸದರುಗಳಲ್ಲಿ ಖತಾವಣಿಯೊಳಗಿನ ಎಲ್ಲ ಖಾತೆಗಳನ್ನು ಕ್ರಮವಾಗಿ ಒಂದರ ಕೆಳಗೊಂದು ಬರೆಯುವರು.

೫. **ರಕಮುಗಳ ಅಂಕಿ** :— ತರುವಾಯ ಪ್ರತಿಯೊಂದು ಖಾತೆಯ ಮುಂದೆ ಆಯಾ ಖಾತೆಗಳ ಆ ವರ್ಷದ ಜಮೆಯ ಮತ್ತು ಖರ್ಚಿನ ಬೇರೀಜುಗಳನ್ನು ಬರೆ ಯುವರು.

೬. **ಬೇರೀಜು** :—ಬಳಿಕ ಜಮೆಯ ರಕಮುಗಳ ಬೇರೀಜನ್ನು ಆ ರಕಾನೆಯಷ್ಟೇ ಗೆರೆಯ ಕೆಳಗೆ ಮತ್ತು ಖರ್ಚಿನ ರಕಮುಗಳ ಬೇರೀಜನ್ನು ಆ ರಕಾನೆಯಷ್ಟೇ ಗೆರೆಯ ಕೆಳಗೆ ಬರೆಯುವರು.

ಈ ಬೇರೀಜುಗಳು ಕೀರ್ದಿಯ ಬಾರಮಾಹೆ ತೇರೀಜುಗಳಿಗೆ ಸರಿಹೋದರೆ ಕೀರ್ದಿ ಯೊಳಗಿನ ಎಲ್ಲ ರಕಮುಗಳು ಖಾತೆಗೆ ಏರಿಸಲ್ಪಟ್ಟವೆಂದು ತಿಳಿಯುವರು.

೭. **ಶಿಲಕಿನ ಅಂಕಿ** ಹಾಗು ೮. **ಅಂತೂ ಬೇರೀಜು** ಕೀರ್ದಿಯಂತೆ.

# ೮ನೆಯ ಪ್ರಕರಣ

## ೧. ವರ್ಷದ ಕೊನೆಯ ಅಥವಾ ಸಾಲ ಅಖೈರ ದಿವಸದ ಜಮಾಖರ್ಚು

ವರ್ಷದ ಕೊನೆಯ ದಿವಸ (ಆಶ್ವಿನ ಬಹುಳ ೩೦) ಕೆಳಗೆ ಬರೆದ ಜಮಾಖರ್ಚು ಗಳನ್ನು ಬರೆಯುವರು.

(೧) ಆ ದಿವಸ ನಡೆದ ವ್ಯವಹಾರದ ಜಮಾಖರ್ಚು ಬರೆದು ವರ್ಷದ ಕೊನೆಯ ರೋಖು ಶಿಲಕನ್ನು ಖುದ್ದ ಖಾತೆಗೆ ಖರ್ಚು ಹಾಕುವರು.

(೨) ಬಡ್ಡಿಯ ಆಕಾರದ ಜಮಾ ಖರ್ಚು.

(೩) **ಬಾಯಿಗೂಡಿಸುವಿಕೆ**:— (ಅ) ಶಿಲಕು ಮಾಲಿನ ಜಮಾಖರ್ಚು. (ಬ) ಇತರ ಜಿಂದಗಿಯ ಜಮಾಖರ್ಚು. (ಕ) ಬಾಬುವಾರ–ಜೀನಸುವಾರ ಖಾತೆಗಳ ಲಾಭ–ಹಾನಿಯ ಜಮಾಖರ್ಚನ್ನು ಬರೆದು ನಫಾತೋಟಾ ಖಾತೆಯನ್ನು ಬಾಯಿಗೂಡಿಸುವರು.

(೪) **ಅಖೈರ ಅಧಾವೆ** :— ಇಸಮುವಾರ ಖಾತೆಗಳ ಬಾಯಿಗೂಡಿಸುವಿಕೆ ಮಾಡುವದು. ( ಇದರಿಂದ ಭಾಂಡವಲ ಖಾತೆಯು ಬಾಯಿಗೂಡುವದು. )

(೧) **ವರ್ಷದ ಕೊನೆಯ ದಿವಸ**:— ಆ ದಿವಸ ನಡೆದ ವ್ಯವಹಾರದ ಜಮಾ ಖರ್ಚು ಬರೆದ ಬಳಿಕ ನಿತ್ಯದಂತೆ ಶಿಲಕು ತೆಗೆದು, ಅದನ್ನು ಖುದ್ದ ಖಾತೆಗೆ ಇಲ್ಲವೆ ಭಾಂಡ ವಲ ಖಾತೆಗೆ ಖರ್ಚು ಬರೆದು, ಅದರ ಕೆಳಗೆ ಖಾ|| ಪಾ|| ಎಂದು ಬರೆಯುವರು.

ಟೀಪು:— (೧) ಈ ಜಮಾಖರ್ಚು ಬರೆದ ಬಳಿಕ, ಮುಂದೆ ಬರೆಯತಕ್ಕ ಬಡ್ಡಿಯ ಜಮಾ ಖರ್ಚು, ಶಿಲಕು ಮಾಲಿನ ಜಮಾಖರ್ಚು, ಲಾಭ-ಹಾನಿಯ ತೋಂಡಮಿಳವಣಿ, ಆಖೈರ ಅಧಾವೆ ಮುಂತಾದವುಗಳೆಲ್ಲ ಪರಭಾರೆ ಜಮಾಖರ್ಚುಗಳಿರುವದರಿಂದ ವರ್ಷದ ಕೊನೆಯ ರೋಖು ಶಿಲಕಿನಲ್ಲಿ ಏನೂ ಹೆಚ್ಚುಕಡಿಮೆಯಾಗುವದಿಲ್ಲ.

(೨) ಕೆಲವರು ವರ್ಷದ ಕೊನೆಯ ಶಿಲಕನ್ನು, ಶಿಲಕು ಮಾಲಿನ ಜಮಾಖರ್ಚು ಬರೆದ ಬಳಿಕ ಖುದ್ದ ಖಾತೆಗೆ ಖರ್ಚು ಬರೆಯುವರು. ಹಾಗು ತಪಶೀಲಿನಲ್ಲಿ, ಇಂತಿಷ್ಟು ರೋಖಶಿಲಕು, ಇಂತಿಷ್ಟು ಶಿಲಕು ಮಾಲು, ಇಂತಿಷ್ಟು ಇತರ ಜಿಂದಗಿ ಎಂದು ಬರೆಯುವರು:— ( ಈ ರಕಮುಗಳನ್ನು ಮರು ವರ್ಷದ ಆರಂಭಕ್ಕೆ ಖುದ್ದ ಖಾತೆಗೆ ಜಮೆ ಹಿಡಿಯುವರು. ) ಕೀರ್ದಿಯ ನಮೂನೆಯಲ್ಲಿ ಶಿಲಕು ಮಾಲಿನ ಜಮಾಖರ್ಚು ನೋಡಿರಿ.

(೨) ಬಡ್ಡಿಯ ಆಕಾರದ ಜಮಾಖರ್ಚು:— ಮಂದಿಯ ಕಡೆಯಿಂದ ತಮಗೆ ಬರತಕ್ಕ ಹಾಗು ತಾವು ಮಂದಿಗೆ ಕೊಡತಕ್ಕ ಬಡ್ಡಿಯ ಲೆಕ್ಕವನ್ನು ಆಯಾ ಖಾತೆಗಳ ಮೇಲಿಂದ ತಯಾರ ಮಾಡಿಕೊಂಡು (೬ನೆಯ ಭಾಗದಲ್ಲಿ ಹೇಳಿದ ರೀತಿಯಂತೆ ಬೇರೊಂದು ಕಾಗದದಲ್ಲಿ ಮಾಡಿಕೊಂಡು) ಈ ಜಮಾಖರ್ಚನ್ನು ಬರೆಯುವರು.

ಟೀಪು:— ಬಡ್ಡಿಯ ಜಮಾಖರ್ಚು ಬರೆಯುವ ನಿಯಮವನ್ನು ಬಡಿಯ ಖಾತೆಯಲ್ಲಿ ನೋಡಿರಿ

# (ತೋಂಡಮಿಳವಣಿ) ಖಾತೆ ಬಾಯಿಗೂಡಿಸುವದು

**ಬಾಯಿಗೂಡಿಕೆ:—** ಜೀನಸುವಾರ, ಬಾಬುವಾರ ಮತ್ತು ಇಸಮುವಾರ ಮುಂತಾದ ಯಾವತ್ತು ಖಾತೆಗಳ ಕೊಡಕೊಳ್ಳುವ ಲೆಕ್ಕವು (ಬಾಕಿಯು*) ಗೊತ್ತಾಗ ಬೇಕೆಂದು ಪ್ರತಿಯೊಂದು ಖಾತೆಯ ಜಮಾ ಹಾಗು ಖರ್ಚಿನ ಬದಿಗಳ ರಕಮುಗಳ ಬೇರೀಜುಗಳನ್ನು ಸರಿ ಮಾಡಿಕೊಳ್ಳುವದಕ್ಕೆ **ಬಾಯಿಗೂಡಿಕೆಯ ಖಾತೆ, ಬಾಯಿಗೂಡಿ ಸೋಣಿ**ವೆನ್ನುವರು. ಇದರ ಸಂಬಂಧವಾಗಿ ಕೀರ್ದಿಯಲ್ಲಿ ಬರೆಯುವ ಜಮಾಖರ್ಚಿಗೆ ಬಾಯಿಗೂಡಿಕೆಯ ಜಮಾಖರ್ಚು ಅನ್ನುವರು.

ಬಾಯಿಗೂಡಿಕೆಯ ಜಮಾಖರ್ಚಿನ ಲೆಕ್ಕದಿಂದ ಅಂಗಡಿಯೊಳಗಿನ ಶಿಲಕು ಎಷ್ಟು? ಯಾವ ಖಾತೆಯಿಂದ ತನಗೆ ಲಾಭ ಇಲ್ಲವೆ ಹಾನಿಯಾದ ಹಣವೆಷ್ಟು? ಮತ್ತು ಜನರಿಂದ ಬರತಕ್ಕ ಹಾಗು ಜನರಿಗೆ ಕೊಡತಕ್ಕ ಹಣವೆಷ್ಟು? ಎಂಬ ಸಂಗತಿಗಳು ತಿಳಿಯುವವು.

## ಬಾಕಿಗಳ ತಾಳೆಯು

**ಬಾಕಿ:—** ಯಾವನೊಬ್ಬನು ತಾನು ವ್ಯವಹಾರ ಮಾಡುವ ಅಂಗಡಿಗೆ ಹೋಗಿ ನನ್ನ ಖಾತೆಗೆ ಕೊಡತಕ್ಕದ್ದೆಷ್ಟು ಎಂದು ಕೇಳುವನು. ಮತ್ತೊಬ್ಬನು ನನ್ನ ಖಾತೆಗೆ ಬರತಕ್ಕದ್ದೆಷ್ಟು ಎಂದು ಕೇಳುವನು. ಇದು ನಮ್ಮ ವ್ಯವಹಾರಿಕ ಮಾತು. ಇವಕ್ಕೇ ಜಮಾಖರ್ಚಿನಲ್ಲಿ ಬಾಕಿಯೆಂದು ಹೇಳುವರು.

ಇದರಲ್ಲಿ ಬರತಕ್ಕ ಬಾಕಿ ಕೊಡತಕ್ಕ ಬಾಕಿ ಎಂದು ಎರಡು ಭಾಗಗಳುಂಟು. ಇವ ರಡಕ್ಕೂ ಕೂಡಿಯೇ ಬಾಕಿಯೆನ್ನುವರು.

**ಬರತಕ್ಕ ಬಾಕಿ ತೆಗೆಯುವ ವಿವರ:—** ನಾವು ಇಡೀ ವರ್ಷದಲ್ಲಿಯಾಗಲಿ ಇಲ್ಲವೆ ತಿಂಗಳಲ್ಲಿಯಾಗಲಿ ಇಲ್ಲವೆ ಕೆಲವೊಂದು ದಿವಸಗಳವರೆಗಾಗಲಿ ಮಾಡಿದ ವ್ಯವಹಾರದಲ್ಲಿ ನಮ್ಮ ಖಾತೆಯಲ್ಲಿ ಇದ್ದ ಎಲ್ಲ ಜಮೆಯ ರಕಮುಗಳನ್ನು ಬೇರೀಜು ಮಾಡಬೇಕು. ಇದ ರಂತೆ ಎಲ್ಲ ಖರ್ಚಿನ ರಕಮಿನ ಬೇರೀಜು ಮಾಡಬೇಕು. ಜಮೆಯ ರಕಮಿನಲ್ಲಿ ಖರ್ಚಿನ ರಕಮು ಹೋಗಿ ಹೆಚ್ಚಾದ ಜಮೆಯ ರಕಮೇ ನಮಗೆ ಬರತಕ್ಕ ಬಾಕಿಯಾಗುವದು.

---

*ಖಾತೆಗಳ ಬಾಕಿಗಳು:— ಯಾವದೊಂದು ಖಾತೆಯ ಕೊಡಕೊಳ್ಳುವ ಲೆಕ್ಕವು ಎಷ್ಟೆಂಬದನ್ನು ತಿಳಿದುಕೊಳ್ಳುವ ಅವಶ್ಯವಿದ್ದಾಗ-ಆ ಖಾತೆಯ ಜಮೆ ಹಾಗು ಖರ್ಚಿನ ರಕಮುಗಳ ಬೇರೀಜುಗಳನ್ನು ಮಾಡಿಕೊಳ್ಳುವರು. ಎರಡೂ ಬದಿಯ ಬೇರೀಜುಗಳು ಸರಿಯಾಗಿದ್ದರೆ, ಆ ಖಾತೆಯ ಬಾಕಿಯು ಹೊರಡುವದಿಲ್ಲ; ಅಂದರೆ ಅದು ಬಾಯಿಗೂಡಿ ಹೋಗುವದು. ಖರ್ಚಿನ ರಕಮುಗಳ ಬೇರೀಜು ಜಮೆಯ ಬೇರೀಜಿಗಿಂತ ಹೆಚ್ಚಾದರೆ, ಹೆಚ್ಚಾದಷ್ಟು ರಕಮು ಆ ಖಾತೆಯಿಂದ ಬರತಕ್ಕದ್ದಾಗುವದು. ಜಮೆಯ ರಕಮುಗಳ ಬೇರೀಜು ಖರ್ಚಿನ ಬೇರೀಜಿಗಿಂತ ಹೆಚ್ಚಾದರೆ, ಹೆಚ್ಚಾದಷ್ಟು ರಕಮು ಆ ಖಾತೆಗೆ ಕೊಡತಕ್ಕದ್ದಾಗುವದು.

ಉದಾಹರಣೆ:— ಲಿಂಗಪ್ಪ ರೇವಣಪ್ಪ ತಿಮ್ಮನಗೌಡ್ರ ಸಾಕೀನ ಅಳಗವಾಡಿ ಇವರ ಖಾತೆ.

| ಜಮೆ ರೂ. | | ಖರ್ಚು ರೂ. | |
|---|---|---|---|
| ೫೦ | ಕೀ. ಪಾ. ೭. ತಾ. ೭. ೨. ೩೬. | ೧೦೦ | ಕೀ. ಪಾ. ೪. ತಾ. ೩. ೧. ೩೬. |
| ೨೦೦ | ಕೀ. ಪಾ. ೯. ತಾ. ೨೦. ೨. ೩೬. | ೬೦ | ಕೀ. ಪಾ. ೮. ತಾ. ೫. ೨. ೩೬. |
| ೩೦ | ಕೀ. ಪಾ. ೩. ತಾ. ೮. ೮. ೩೬. | ೫ | ಕೀ. ಪಾ. ೨೦. ತಾ. ೧೦. ೬. ೩೬. |
| | | ೨೫ | ಕೀ. ಪಾ. ೮೦ ತಾ. ೩. ೨. ೩೬. |
| ೨೮೦ | ಅಂತು ಜಮೆಯು ಬೇರೀಜು. | ೧೯೦ | ಅಂತು ಖರ್ಚಿನ ಬೇರೀಜು. |

ಸದರಿಯವರ ಖಾತೆಗೆ ೨೮೦ ರೂ. ಜಮೆ ಅದೆ; ೧೯೦ ರೂ. ಖರ್ಚು ಅದೆ. ಆದರ ಮೇಲೆ ಇವರಿಗೆ ೯೦ ರೂ. ಬರತಕ್ಕ ಬಾಕಿಯಾಯಿತು. ಇದು ಲಿಂಗಪ್ಪನಿಗೆ ಕೊಡತಕ್ಕ ಬಾಕಿಯು.

ಬರತಕ್ಕ ಬಾಕಿ ತೆಗೆಯುವ ವಿವರ:— ನಮ್ಮ ಖಾತೆಗೆ ಇದ್ದ ಎಲ್ಲ ಜಮೆಯ ರಕಮುಗಳನ್ನು ಬೇರೀಜು ಮಾಡಬೇಕು. ಇದರಂತೆ ಎಲ್ಲ ಖರ್ಚಿನ ರಕಮುಗಳನ್ನು ಬೇರೀಜು ಮಾಡಬೇಕು. ಖರ್ಚಿನ ಕಡೆಯ ರಕಮಿನಲ್ಲಿ ಜಮೆಯ ಕಡೆಯ ರಕಮು ಹೋಗಲಾಗಿ ಹೆಚ್ಚಾದ ಖರ್ಚಿನ ರಕಮೇ ಬರತಕ್ಕ ಬಾಕಿಯಾಗುವುದು.

ಉದಾಹರಣೆ:— ಶಂಭುಲಿಂಗಪ್ಪ ಕುಲಕರ್ಣಿ ಸಾ|| ಧಾರವಾಡ ಇವರ ಖಾತೆ.

| ಜಮೆ ರೂ. | | ಖರ್ಚು ರೂ. | |
|---|---|---|---|
| ೧೦೦ | ಕೀ. ಪಾ. ೩೦. ತಾ. ೧. ೧. ೩೭. | ೪೦೦ | ಕೀ. ಪಾ. ೧೨. ತಾ. ೩. ೩. ೩೭. |
| ೫೦೦ | ಕೀ. ಪಾ. ೧೯. ತಾ. ೩. ೪. ೩೭. | ೩೦೦ | ಕೀ. ಪಾ. ೨೮. ತಾ. ೨೫. ೪. ೩೭. |
| ೬೦೦ | ಅಂತು ಜಮೆಯ ಬೇರೀಜು. | ೭೦೦ | ಅಂತು ಖರ್ಚಿನ ಬೇರೀಜು. |

ಸದರಿಯವರ ಖಾತೆಗೆ ೬೦೦ ರೂ. ಜಮೆ, ೭೦೦ ರೂ. ಖರ್ಚು ಅದೆ. ಅಂದಮೇಲೆ ಇವರಿಂದ ೧೦೦ ರೂ. ಬರತಕ್ಕ ಬಾಕಿಯಾಯಿತು. ಇದು ಶಂಭುಲಿಂಗಪ್ಪನವರಿಂದ ಬರತಕ್ಕ ಬಾಕಿಯು.

**ಖಾತೆಗಳ ಬಾಕಿಗಳ ವರ್ಗೀಕರಣವು:**— ತೋಂಡಮಿಳವಣಿಯ ಸಲುವಾಗಿ ಖಾತೆಗಳ ಬಾಕಿಗಳಲ್ಲಿ (೧) **ಕಚ್ಚಾ ಬಾಕಿಗಳೆಂದೂ** (೨) **ಪಕ್ಕಾ ಬಾಕಿಗಳೆಂದೂ** ಎರಡು ವರ್ಗಗಳನ್ನು ಮಾಡಬಹುದು.

(೧) **ಕಚ್ಚಾ ಬಾಕಿ:**— ಯಾವ ಖಾತೆಗಳ ಬಾಕಿಗಳು ವರ್ಷದ ಕೊನೆಗೆ ನಫಾ ತೋಟಾ ಖಾತೆಯಲ್ಲಿ ಸಮಾವೇಶವಾಗಿ ಇಲ್ಲದಂತಾಗುವವೋ ಆ ಬಾಕಿಗಳು ಕಚ್ಚಾ ಬಾಕಿಗಳು.

ಉದಾ:— ಜೀನಸುವಾರ ಖಾತೆಗಳ ಲಾಭ-ಹಾನಿಗಳು, ಹಣ ಮುಳುಗಿದ ಖಟ್ಟ ಬಾಕಿಗಳು, ಬಡ್ಡಿ, ದಲಾಲಿ, ಡೆಡ್ ಸ್ಟಾಕ್ ಸಾಮಾನುಗಳ ಸವಕಳಿಯ ಬೆಲೆಗಳು, ಮನೆಗಳ ಖರ್ಚು, ಅಂಗಡಿಯ ಖರ್ಚು, ಮೊದಲಾದ ಉತ್ಪನ್ನದ ಹಾಗು ಖರ್ಚಿನ ಖಾತೆಗಳ ಬಾಕಿಗಳು. (ಈ ಬಾಕಿಗಳ ಸಂಬಂಧವು ಮರುವರುಷದ ಆರಂಭಕ್ಕೆ ಏನೂ ಉಳಿಯುವದಿಲ್ಲ.)

(೨) **ಪಕ್ಕಾ ಬಾಕಿ:—** ಯಾವ ಖಾತೆಗಳ ಬಾಕಿಗಳನ್ನು ಮರುವರ್ಷದ ಆರಂಭಕ್ಕೆ ಪುನಃ ಆಯಾ ಖಾತೆಗಳಿಗೆ ತರುವದು ಅವಶ್ಯವಿರುವದೋ ಆ ಬಾಕಿಗಳಿಗೆ ಪಕ್ಕಾಬಾಕಿಗಳೆನ್ನುವರು.

ಉದಾ:— ಎಲ್ಲ ಇಸಮವಾರ ಖಾತೆಗಳ ಬಾಕಿಗಳು, ವರ್ಷದ ಕೊನೆಯ ರೋಖು ಶಿಲಕು, ಶಿಲಕುಮಾಲಿನ ಬೆಲೆಗಳು, ಇತರ ಜಿಂದಗಿಯ ಬೆಲೆಗಳು.

## ಬಾಕಿಗಳಿಗೆ ತಾಳೆಯಲ್ಲಿ ಎರಡು ಪ್ರಕಾರದ ಬಾಕಿಗಳ ತಾಳೆಯು ಹೊರಡುವದು

೧. ವ್ಯಕ್ತಿಯ ಮನೆತನ ಸಂಬಂಧಪಟ್ಟದ್ದು. ೨. ವ್ಯಾಪಾರೀ ದೃಷ್ಟಿಯಿಂದ ಸಂಬಂಧಪಟ್ಟದ್ದು

(೧) ವ್ಯಕ್ತಿಯ ಮನೆತನ ಬಾಕಿಗಳ ತಾಳೆಯಲ್ಲಿ (ಅ) ಉತ್ಪನ್ನ ಖರ್ಚಿನ ಖಾತೆ. (ಬ) ಆಥಾವೆ ಇವು ಹೊರಡುವವು.

(೨) ವ್ಯಾಪಾರೀ ದೃಷ್ಟಿಯಿಂದ ಸಂಬಂಧಪಟ್ಟದ್ದರಲ್ಲಿ (ಅ) ಖರೀದಿ ವಿಕ್ರಿಯ ಖಾತೆ (ಬ) ಲಾಭ ಹಾನಿಯ ಖಾತೆ (ಕ) ಆಥಾವೆಯ ಖಾತೆ. ಇವು ಹೊರಡುವವು.

(೧) ಉತ್ಪನ್ನ ಖರ್ಚಿನಖಾತೆ: ಇವುಗಳಲ್ಲಿ ಕಚ್ಚಾ ಬಾಕಿಗಳಷ್ಟೇ ಸಮಾವೇಶವಾಗುವವು.

(೨) ಆಥಾವೆಯ ಖಾತೆ:— ಇವುಗಳಲ್ಲಿ ಪಕ್ಕಾ ಬಾಕಿಗಳಷ್ಟೇ ಸಮಾವೇಶವಾಗುವವು.

(೩) ಖರೀದಿ ವಿಕ್ರಿಯ ಖಾತೆ:— ಇವುಗಳಲ್ಲಿ ಕಚ್ಚಾ ಬಾಕಿ ಪಕ್ಕಾಬಾಕಿಗಳ ಸಮಾವೇಶವದೆ. ಆರಂಭದ ಶಿಲಕು, ಮಾಲು ಖರೀದಿ ವಿಕ್ರಿ, ಇವು ಕಚ್ಚಾಬಾಕಿ, ಆದರೆ ಅಖೈರ ಶಿಲಕು ಮಾಲು ಪಕ್ಕಾಬಾಕಿ ಇರುವದು.

(೪) ಲಾಭಹಾನಿಯ ಖಾತೆ: ಇವುಗಳಲ್ಲಿ ಕಚ್ಚಾ ಬಾಕಿಗಳಷ್ಟೇ ಸಮಾವೇಶವಾಗುವವು.

ಟೀಪು:—(೧) ಅಮಾನತ, ತಸಲಮಾತ, ರವಾನಗಿ ಮುಂತಾದ ಖಾತೆಗಳು ವರ್ಷದ ಕೊನೆಗೆ ಮುಗಿಯದಿದ್ದರೆ, ಅವುಗಳ ಬಾಕಿಗಳು ಪಕ್ಕಾಬಾಕಿಗಳಾಗುವವು.

(೨) ಮನೆ ಖರ್ಚು ಖಾತೆಯ ಬಾಕಿಯು ಕಚ್ಚಾ ಬಾಕಿಯಾದ್ದರಿಂದ ಅದನ್ನು ಕೆಲವರು ನಫಾತೋಟಾ ಖಾತೆಗೆ ಒಯ್ಯುವರು; ಈ ಬರಹದಿಂದ ಅಂಗಡಿಯ ನಿಜವಾದ ಲಾಭಹಾನಿಯು ತಿಳಿಯುವದಿಲ್ಲ. ಆದ್ದರಿಂದ ಆ ಬಾಕಿಯನ್ನು ಖುದ್ದ ಖಾತೆಗೆ ಖರ್ಚುಹಾಕಬೇಕು.

## ಬಾಯಿಗೂಡಿಕೆಯ ಜಮಾಖರ್ಚು—ಇದನ್ನು ಮುಂದೆ ಹೇಳಿದಂತೆ ಎರಡು ಭಾಗಮಾಡಿ, ಇಲ್ಲವೆ ಒಟ್ಟಾಗಿ ಬರೆಯುವರು.

ಮೊದಲನೆಯ ಭಾಗದ ಜಮಾಖರ್ಚು ಬರಕೊಳ್ಳುವ ಮೊದಲು ತನ್ನಲ್ಲಿದ್ದ ಶಿಲಕುಮಾಲು ಎಷ್ಟು ಇತರ ಜಿಂದಗಿಯ ಬೆಲೆ ಎಷ್ಟು? ಎಂಬುದರ ತಪಶೀಲವಾರ ಟಿಪ್ಪಣಿಯನ್ನು ಮಾಡಿಕೊಂಡು ಬಳಿಕ ಈ ಜಮಾಖರ್ಚನ್ನು ಬರೆಯುವರು. [ಕೀರ್ದಿಪಾನು ೩೭-೩೮ ನೋಡಿರಿ.]

### ಬಾಯಿಗೂಡಿಕೆಯ ಭಾಗ ೧.

# (ಅ) ಶಿಲಕುಮಾಲಿನ ಹಾಗೂ (ಬ) ಇತರ ಜಿಂದಗಿಯ ಜಮಾಖರ್ಚು

(ಅ) ವರ್ಷದ ಕೊನೆಗೆ ಇಲ್ಲವೆ ಬೇಕಾದಾಗ ಶಿಲಕುಮಾಲಿನ ಜಮಾಖರ್ಚು ಬರೆಯುವದಾದರೆ, ತನ್ನಲ್ಲಿರುವ ಶಿಲಕು ಮಾಲಿನ ಬೆಲೆಯನ್ನು ತಾನು ಕೊಂಡ

ಧಾರಣಿಯಂತೆ, ಆಕಾರ ಮಾಡಿ, ಆಯಾ ಮಾಲಿನ ಬೆಲೆಯನ್ನು ಆಯಾ ಖಾತೆಗಳಿಗೆ ಜಮಾ (ಬಾಯಿ-ಗೂಡಿಕೆಗಾಗಿ) ಹಿಡಿದು, ಒಟ್ಟು ರಕಮನ್ನು ಖುದ್ದ ಖಾತೆಗೆ [೧೭೪] ಖರ್ಚು ಬರೆಯುವರು.

ವರ್ಷದ ಕೊನೆಯ ಶಿಲಕನ್ನು ಮೊದಲು ಖುದ್ದ ಖಾತೆಗೆ ಖರ್ಚು ಹಾಕದಿದ್ದರೆ, ಅದನ್ನು ದಿನದ ಶಿಲಕಿನಂತೆ ಮೊದಲಿಗೆ ಜಮೆಯ ಕಡೆಗೆ ಬರಕೊಳ್ಳುವರು. ಈ ರೋಖ ಶಿಲಕನ್ನೂ ಶಿಲಕುಮಾಲಿನ, ಹಾಗು ಇತರ ಜಿಂದಗಿಯ ಬೆಲೆಯನ್ನೂ ಒಟ್ಟುಗೂಡಿಸಿ ಅದನ್ನು ಖುದ್ದ ಖಾತೆಗೆ ಖರ್ಚು ಹಾಕಿ, ತಪಶೀಲಿನಲ್ಲಿ ಈ ಎಲ್ಲ ರಕಮುಗಳನ್ನು ಬರೆದಿಡುವರು. ಈ ರಕಮುಗಳನ್ನೆಲ್ಲ ಮರುವರ್ಷದ ಆರಂಭಕ್ಕೆ ಖುದ್ದ ಖಾತೆಗೆ ಜಮೆಹಿಡಿಯುವರು.

ಟೀಪು:—(೧) ಶಿಲಕುಮಾಲಿನ ಬೆಲೆಯನ್ನು ಪೇಟೆಯ ಧಾರಣಿಯಂತೆ ಕೆಲವರು ಆಕಾರ ಮಾಡುವರು, ಅದ್ದರಿಂದ ನಿಜವಾದ ಲಾಭಹಾನಿಯು ತಿಳಿಯಲಾರದು. (೨) ಮಾಲಿನ ಖತಾವಣಿ ಅಥವಾ ವಖಾರಬುಕ್ಕಿನ ಮೇಲಿಂದ ಯಾವ ಯಾವ ಮಾಲು ಎಷ್ಟೆಷ್ಟು ಅದೆ ಎಂಬದು ತಿಳಿಯುವದು.

(ಬ) ಇತರ ಜಿಂದಗಿಯ ಜಮಾಖರ್ಚನ್ನು ಶಿಲಕು ಮಾಲಿನ ಜಮಾಖರ್ಚಿನಂತೆಯೇ ಮಾಡಬೇಕು.

ಡೆಡ್‌ಸ್ಟಾಕ ಸಾಮಾನುಗಳು ಬಹುದಿವಸ ಬಾಳುವವು. ಅವುಗಳನ್ನು ಮಾರಿದರೆ ಬೆಲೆ ಬರುವದು. ಅದ್ದರಿಂದ ಡೆಡ್‌ಸ್ಟಾಕ ಖಾತೆಯ ತೋಂಡಮಿಳವಣಿಯನ್ನು ಶಿಲಕುಮಾಲಿನ ತೋಂಡಮಿಳವಣಿಯಂತೆ ಮಾಡುವದು ಸರಿಯಾದದ್ದು.

## ಬಾಯಿಗೂಡಿಕೆಯ ಭಾಗ ೨.

**(ಕ) ಲಾಭ-ಹಾನಿಗಳ ಜಮಾಖರ್ಚು:**— ಈ ಭಾಗದ ಜಮಾಖರ್ಚು ಬರಕೊಳ್ಳುವದಕ್ಕಾಗಿ ಮೊದಲು ಜೀನಸುವಾರ, ಬಾಬುವಾರ ಖಾತೆಗಳಿಂದಾದ ಲಾಭ-ಹಾನಿಗಳ ಬೇರೆ ಬೇರೆ ಟಿಪ್ಪಣಿಗಳನ್ನು ಮಾಡಿಕೊಂಡ ಬಳಿಕ ಈ ಜಮಾಖರ್ಚು ಬರೆಯುವರು. (ಕೀರ್ದಿಪಾನು ೪೨-೪೩ ನೋಡಿರಿ.)

ಟೀಪು:— (೧) ದಲಾಲಿ, ಕಮಿಶನ್; ಹುಂಡಾವಳಿ, ಸಕ್ರಾಯಿ-ನಕ್ರಾಯಿ, ಬಡ್ಡಿ, ಪಗಾರ, ಮನೆಯ ಖರ್ಚು, ಅಂಗಡಿಯ ಖರ್ಚು, ಹಣಮುಳುಗಿದ ಖಟ್ಟೆ ಬಾಕಿ, ಧರ್ಮಾದಾವ ಮುಂತಾದ ಉತ್ಪನ್ನದ ಹಾಗು ಖರ್ಚಿನ ಖಾತೆಗಳೆಲ್ಲ ನಫಾ-ತೋಟಾ ಖಾತೆಯ ಒಳಭೇದಗಳಾಗುವವು. ಅದುದರಿಂದ ಈ ಖಾತೆಗಳ ವರ್ಷದ ಕೊನೆಯ ಬಾಕಿಯ ರಕಮುಗಳನ್ನೆಲ್ಲ ನಫಾ-ತೋಟಾ ಖಾತೆಗೆ ಸೇರಿಸುವರು.

(೨) ಅದರೆ ಯಾವದೊಂದು ಗುಡಿ, ಧರ್ಮಶಾಲೆಯ ಜೀರ್ಣೋದ್ಧಾರದ ಬಗ್ಗೆ ಇಲ್ಲವೆ ಯಾವದೊಂದು ಸಾರ್ವಜನಿಕ ಕೆಲಸದ ಬಗ್ಗೆ ಕೂಡಿಸಿದ ವರ್ಗಣಿಯ ಅಥವಾ ಧರ್ಮಾದಾವ ಹಣದ ಖಾತೆಯ ರಕಮನ್ನು ನಫಾ-ತೋಟಾ ಖಾತೆಗೆ ಸೇರಿಸುವದಿಲ್ಲ. ಯಾಕಂದರೆ— ಈ ಖಾತೆಗಳ ರಕಮುಗಳನ್ನು ಮೊದಲು ಗೊತ್ತು ಮಾಡಿದ ಕೆಲಸಗಳಿಗೆ ಎಂದಾದರೂ ಖರ್ಚುಮಾಡಲಿಕ್ಕೆ (ಕೊಡಲಿಕ್ಕೆ) ಬೇಕು. ಇಂಥ ರಕಮುಗಳು ಪಕ್ಕಾ ಬಾಕಿಗಳಾಗುವದರಿಂದ ಅವುಗಳನ್ನು ಅಥಾವೆಗೆ ಒಯ್ಯುವರು.

# ೩. ಬಾಯಿಗೂಡಿಕೆಯು ಜಮಾಖರ್ಚನ್ನು ಮುಂದೆ ಹೇಳಿದಂತೆ ಬರೆಯುವರು

**ಮೇಲ್ವಿಳಾಸ:—** ಕೀರ್ದಿಯಲ್ಲಿ ಮೊದಲಿಗೆ ತೋಂಡಮಿಳವಣಿ ಜಮಾಖರ್ಚು ಎಂದು ಬರೆಯುವರು.

**ಮುದ್ದತು:—** (೩) **ರಕಮುಗಳ ಸ್ಥಳ:—** ಅದರ ಕೆಳಗೆ ವರ್ಷದ ಕೊನೆಯ ಮಿತಿ ಕಟ್ಟುವರು.

(೪) **ರಕಮುಗಳ ಅಂಕಿ:—** ಲಾಭದ ರಕಮುಗಳನ್ನು ಆಯಾ ಖಾತೆಗಳಿಗೆ (೧೬೯—೧೭೨, ೧೮೩—೧೯೧) ಖರ್ಚು ಬರೆದು, ಒಟ್ಟು ರಕಮುಗಳನ್ನು ನಫಾ-ತೋಟಾ ಖಾತೆಗೆ ಜಮಾ ಹಿಡಿಯುವರು, ಮತ್ತು ಹಾನಿಯ ರಕಮುಗಳನ್ನು ಆಯಾ ಖಾತೆಗಳಿಗೆ (೧೭೬—೧೮೨) ಜಮಾ ಹಿಡಿದು, ಒಟ್ಟು ರಕಮನ್ನು ನಫಾ-ತೋಟಾ ಖಾತೆಗೆ ಖರ್ಚು ಬರೆಯುವರು.

ನಫಾ-ತೋಟಾ ಖಾತೆಯಲ್ಲಿ ಖರ್ಚಿನ ರಕಮಿಗಿಂತ ಜಮೆಯ ರಕಮು ಹೆಚ್ಚಾದರೆ, ಹೆಚ್ಚಾದ ರಕಮಿಗೆ "ನಿವಳ ಲಾಭ" ಅನ್ನುವರು. ಜಮೆಯ ರಕಮಿಗಿಂತ ಖರ್ಚಿನ ರಕಮು ಹೆಚ್ಚಾದರೆ, ಹೆಚ್ಚಾದ ರಕಮಿಗೆ "ನಿವಳ ಹಾನಿ" ಅನ್ನುವರು.

***ನಿವಳ ಲಾಭ ಹಾನಿ:—** ನಿವಳ ಲಾಭವಾದ ಹಣವನ್ನು ನಫಾ-ತೋಟಾ ಖಾತೆಗೆ ಖರ್ಚು ಬರೆದು, ಭಾಂಡವಲ ಖಾತೆಗೆ ಜಮಾ ಹಿಡಿಯುವರು. ನಿವಳ ಹಾನಿಯಾದಷ್ಟು ಹಣವನ್ನು ನಫಾ-ತೋಟಾ ಖಾತೆಗೆ ಜಮಾ ಹಿಡಿದು ಭಾಂಡವಲ ಖಾತೆಗೆ ಖರ್ಚು ಬರೆಯುವರು.

**ಬೇರೀಜು:—** ಬಳಿಕ ಜಮೆಯ ರಕಮುಗಳ ಬೇರೀಜನ್ನು ಜಮೆಯ ಸದರಿನಲ್ಲಿ ತಕ್ಕಷ್ಟು ಗೆರೆಯ ಕೆಳಗೆ, ಮತ್ತು ಖರ್ಚಿನ ರಕಮುಗಳ ಬೇರೀಜನ್ನು ತಕ್ಕಷ್ಟು ಗೆರೆಯ ಕೆಳಗೆ ಬರೆಯುವರು. ಇವೆರಡೂ ಬೇರೀಜುಗಳು ಸರಿಯಾಗುವವು.

# ೪. ಅಖೈರ ಅಥಾವೆಯು

ವರ್ಷದ ಕೊನೆಗೆ (ಇಲ್ಲವೆ ಬೇಕಾದಾಗ) ಮಂದಿಯ ಕಡೆಯಿಂದ ತನಗೆ ಬರತಕ್ಕ, ಹಾಗು ತಾನು ಮಂದಿಗೆ ಕೊಡತಕ್ಕ ಬಾಕಿಯ ರಕಮಿನ ಖಾತೆಗಳನ್ನು ಬಾಯಿಗೂಡಿಸುವದಕ್ಕಾಗಿ ಕೀರ್ದಿಯಲ್ಲಿ ಮಾಡುವ ಜಮಾಖರ್ಚಿಗೆ ಅಖೈರ ಅಥಾವೆ ಅನ್ನುವರು.

---

*ಟೀಪು:— ಪಾಲಿನ ಅಂಗಡಿ ಇದ್ದರೆ ಮೇಲೆ ಹೇಳಿದಂತೆ ಲಾಭ-ಹಾನಿಗಳ ರಕಮುಗಳನ್ನು ನಫಾ-ತೋಟಾ ಖಾತೆಗೆ ಒಯ್ಯುವರು. ಆದರೆ ಸ್ವಂತ ಅಂಗಡಿ ಇದ್ದರೆ ನಿವಳ ಲಾಭ-ಹಾನಿಗಳ ಲೆಕ್ಕ ನೋಡುವ ಆಪೇಕ್ಷೆ ಇರದಿದ್ದರೆ ಒಟ್ಟು ಲಾಭದ ರಕಮನ್ನು ಖುದ್ದ ಖಾತೆಗೆ (೧೭೫) ಜಮಾ ಬರೆದು, ಒಟ್ಟು ಹಾನಿಯ ರಕಮನ್ನು ಖುದ್ದ ಖಾತೆಗೆ (೯೭೨) ಖರ್ಚು ಬರೆಯುವರು.

ಟೀಪು :— ಈ ಜಮಾಖರ್ಚು ಬರಕೊಳ್ಳುವ ಮೊದಲು ಎಲ್ಲ ಇಸಮುವಾರ ಖಾತೆಗಳಿಂದ ಹಾಗೂ ಅಮಾನತ, ತಸಲಮಾತ, ರವಾನಗಿ, ಠೇವು, ಕ್ಯಾಶ ಸರ್ಟಿಫಿಕೇಟ, ಲೋನ (ಸಾಲದ ಪತ್ರಗಳು), ಸರಕಾರೀ ಪ್ರಾಮಿಸರಿ ನೋಟುಗಳು ಮುಂತಾದವುಗಳಿಂದ ತಮಗೆ ಬರತಕ್ಕದ್ದೆಷ್ಟು, ಹಾಗು ತಾನು ಕೊಡತಕ್ಕದ್ದೆಷ್ಟು ಎಂಬ ಸಂಗತಿಗಳ ಟಿಪ್ಪಣಿಯನ್ನು (ಅಥಾವೆ ಪಟ್ಟಿಯನ್ನು) ತಯಾರಮಾಡಿಕೊಂಡು, ಬಳಿಕ ಈ ಜಮಾಖರ್ಚನ್ನು ಬರೆಯುವರು.

(೧) **ಮೋಲ್ಪಿಳಾಸ :—** ಮೊದಲಿಗೆ "ಅಖೈರ ಅಥಾವೆ" ಎಂದು (ಬೀತವಳಿಯಾಗುವಂತೆ) ಬರೆಯುವರು.

(೨) **ಮುದ್ದತು :—** ಅದರ ಕೆಳಗೆ ವರ್ಷದ ಕೊನೆಯ ಮಿತಿಯನ್ನು ಬರೆಯುವರು.

(೩) **ರಕಮುಗಳ ಸ್ಥಳ :—** ಕೀರ್ದಿಯ ಜಮೆಯ ಸದರಿನಲ್ಲಿ ಜಮಾ——ರೂ. ಖರ್ಚಿನ ಸದರುಗಳಲ್ಲಿ ಖರ್ಚು——ರೂ. ಎಂದು ಬರೆಯುವರು.

(೪) **ರಕಮುಗಳ ಅಂಕಿ :—** ಬಳಿಕ ತಾನು ಮಂದಿಗೆ ಕೊಡತಕ್ಕ ರಕಮುಗಳನ್ನು ಆಯಾ ಖಾತೆಗಳಿಗೆ (೧೯೪-೨೦೦) ಖರ್ಚು ಬರೆದು, ಖುದ್ದ ಖಾತೆಗೆ (೧೯೩) ಜಮಾ ಹಿಡಿಯುವರು. ಹಾಗೂ ಮಂದಿಯ ಕಡೆಯಿಂದ ತನಗೆ ಬರತಕ್ಕ ರಕಮುಗಳನ್ನು ಆಯಾ ಖಾತೆಗಳಿಗೆ (೧೯೪-೧೯೭) ಜಮಾ ಹಿಡಿದು, ಖುದ್ದ ಖಾತೆಗೆ (೨೦೧) ಖರ್ಚು ಬರೆಯುವರು.

(೫) **ರಕಮುಗಳ ಬೇರೀಜು :—** ತರುವಾಯ ಜಮೆಯ ಹಾಗೂ, ಖರ್ಚಿನ ರಕಮುಗಳ ಬೇರೀಜುಗಳನ್ನು ಮಾಡಿ ತಕ್ಕಷ್ಟು ಅಡ್ಡ ಗೆರೆಗಳ ಕೆಳಗೆ ಬರೆದು, ಅದರ ಮುಂದೆ ಅಕ್ಷರದಲ್ಲಿ ಇಂತಿಷ್ಟು ರೂ. ಗಳೆಂದು ಬರೆದು ದಸ್ತೂರ ಹಾಕಿ ಸಹಿ ಮಾಡುವರು. (ಕೀರ್ದಿಯ ನಮೂನೆ ೨೧ ಪ್ರಶ್ನೆ ನೋಡಿರಿ.)

ಟೀಪು :— ಈ ರಕಮುಗಳನ್ನು ಖುದ್ದ ಖಾತೆಗೆ ಬರಕೊಳ್ಳಲು, ಅದು ಬಾಯಿಗೂಡುವದು. ವರ್ಷದ ಜಮಾಖರ್ಚು ಸರಿಯಾಗಿ ಬರೆಯಲ್ಪಟ್ಟಿದೆಯೋ ಇಲ್ಲವೋ ಎಂಬುದನ್ನು ಈ ಸ್ಥಳದಲ್ಲಿಯೇ ಪರೀಕ್ಷಿಸುವರು.

**ಮನೆತನದ ಬಾಯಿಗೂಡಿಕೆ :—** **ಕೀರ್ದಿಯಲ್ಲಿ ಜಮಾಖರ್ಚು ಮಾಡುವ ರೀತಿ.** **ಉತ್ಪನ್ನ ಖರ್ಚಿನ ಖಾತೆ :—** (ನಿವಳ ಉತ್ಪನ್ನ ಹೊರತುಪಡಿಸಿ) ಆಯಾ ಖಾತೆಗಳಿಗೆ ಜಮೆ ಹಿಡಿದು ಒಟ್ಟು ರಕಮನ್ನು ಉತ್ಪನ್ನ ಖರ್ಚಿನ ಖಾತೆಗೆ ಖರ್ಚು ಬರೆಯುವರು. ಇದರಂತೆ ಜಮೆಯ ಕಡೆಯ ಎಲ್ಲ ರಕಮುಗಳನ್ನು ಆಯಾ ಖಾತೆಗಳಿಗೆ ಖರ್ಚು ಬರೆದು ಉತ್ಪನ್ನ ಖರ್ಚಿನ ಖಾತೆಗೆ ಜಮೆ ಹಿಡಿಯುವರು. ಆದರೆ ನಿವಳ ಉತ್ಪನ್ನವನ್ನು ಮಾತ್ರ ಉತ್ಪನ್ನ ಖರ್ಚಿನ ಖಾತೆಗೆ ಖರ್ಚು ಬರೆದು ಅಥಾವೆಯ ಖಾತೆಗೆ ಜಮೆ ಹಿಡಿಯುವರು.

**ಅಥಾವೆ :—** ಇದರಲ್ಲಿಯ (ಅಖೈರ ಶಿಲಕು, ನಿವಳ ಖರ್ಚು ಹೊರತುಪಡಿಸಿ) ಖರ್ಚಿನ ಕಡೆಯ ಎಲ್ಲ ರಕಮುಗಳನ್ನು ಆಯಾ ಖಾತೆಗಳಿಗೆ ಜಮೆ ಹಿಡಿದು ಒಟ್ಟು ಹಣವನ್ನು ಅಥಾವೆಯ ಖಾತೆಗೆ ಖರ್ಚು ಬರೆಯುವರು. ಮತ್ತು ನಿವಳ ಖರ್ಚು

ಸಹಿತ ಅಥಾವೆಯ ಖಾತೆಗೆ ಖರ್ಚು ಬರೆಯುವರು. ಮತ್ತು ನಿವಳ ಖರ್ಚು—ಉತ್ಪನ್ನ ಖರ್ಚಿನ ಖಾತೆಗೆ ಜಮೆ ಹಿಡಿಯುವರು. ಅಖೈರ ಶಿಲುಕಿನದು ಇಷ್ಟಕ್ಕೇ ಮುಗಿಯುವದು. ಅಥಾವೆಯ ಜಮೆಯ ಕಡೆಯ (ನಿವಳ ಉತ್ಪನ್ನ ಹೊರತುಪಡಿಸಿ) ಎಲ್ಲ ರಕಮುಗಳನ್ನು ಆಯಾ ಖಾತೆಗೆ ಖರ್ಚು ಬರೆದು ಒಟ್ಟು ರಕಮು (ನಿವಳ ಉತ್ಪನ್ನ ಸಹಿತ) ಅಥಾವೆ ಖಾತೆಗೆ ಜಮೆ ಹಿಡಿಯುವರು.

**ಅಂಗಡಿಯವರ ಬಾಯಿಗೂಡಿಕೆ:—ಕೀರ್ದಿಯಲ್ಲಿ ಜಮಾಖರ್ಚು ಮಾಡುವ ರೀತಿ. ಲಾಭಹಾನಿಯ ಖಾತೆ:**— ಇದರಲ್ಲಿಯ ಖರ್ಚಿನ ಕಡೆಯ (ನಿವಳ ಲಾಭವನ್ನು ಹೊರತುಪಡಿಸಿ) ಎಲ್ಲ ರಕಮುಗಳನ್ನು ಆಯಾ ಖಾತೆಗಳಿಗೆ ಜಮೆ ಹಿಡಿದು (ನಿವಳ ಲಾಭವನ್ನು ಸಹಿತ) ಲಾಭ ಹಾನಿಯ ಖಾತೆಗೆ ಖರ್ಚು ಬರೆಯುವರು. ನಿವ್ವಳ ಲಾಭವನ್ನು ಅಥಾವೆಯ ಖಾತೆಗೆ ಜಮೆ ಹಿಡಿಯುವರು. ಇದರಂತೆ ಜಮೆಯ ಕಡೆಯ ಎಲ್ಲ ರಕಮುಗಳನ್ನು ಲಾಭಹಾನಿಯ ಖಾತೆಗೆ ಜಮೆ ಹಿಡಿದು (ನಿವಳ ಹಾನಿಯನ್ನು ಹೊರತುಪಡಿಸಿ) ಎಲ್ಲ ರಕಮನ್ನು ಆಯಾ ಖಾತೆಗಳಿಗೆ ಖರ್ಚು ಬರೆಯುವರು.

**ಅಥಾವೆಯ ಖಾತೆ:**— ಮೇಲಿನ ಅಥಾವೆಯಂತೆ ಮಾಲು ಮಾರುವರು. ಇದರಲ್ಲಿ ಅದಕ್ಕಿಂತ ಅಖೈರ ಶಿಲಕು ಮಾಲು ಒಂದು ಹೆಚ್ಚಿಗೆ ಇರುವದು. ಇದನ್ನು ಅಥಾವೆಯ ಖಾತೆಗೆ ಖರ್ಚು ಬರೆದು ಖರೀದಿ ವಿಕ್ರಿಯ ಖಾತೆಗೆ ಜಮೆ ಹಿಡಿಯುವರು. ನಿವಳ ಉತ್ಪನ್ನದಂತೆ ನಿವಳ ಲಾಭದ ಜಮಾಖರ್ಚು ಮಾಡುವರು.

**ಖರೀದಿ ವಿಕ್ರಿಯ ಖಾತೆ:**— ಇದರಲ್ಲಿಯ ಖರ್ಚಿನ ಕಡೆಯ (ವ್ಯಾಪಾರಲಾಭವನ್ನು ಹೊರತುಪಡಿಸಿ) ಎಲ್ಲ ರಕಮುಗಳನ್ನು ಖರೀದಿಯ ಖಾತೆಗೆ ಜಮೆ ಹಿಡಿದು ಒಟ್ಟು ರಕಮನ್ನು (ವ್ಯಾಪಾರ ಲಾಭವನ್ನು ಸಹಿತ) ಖರೀದಿ ವಿಕ್ರಿಯ ಖಾತೆಗೆ ಖರ್ಚು ಬರೆಯುವರು. ವ್ಯಾಪಾರಿಯ ಲಾಭವನ್ನು ಮುಂದೆ ಲಾಭಹಾನಿಯ ಖಾತೆಗೆ ಜಮೆ ಹಿಡಿಯುವರು. ಇನ್ನು ಜಮೆಯ ಕಡೆಯ ಎಲ್ಲ ರಕಮುಗಳನ್ನು ಖರೀದಿ ವಿಕ್ರಿಯ ಖಾತೆಗೆ ಜಮೆ ಹಿಡಿದು (ಅಖೈರ ಶಿಲಕುಮಾಲನ್ನು ಹೊರತು) ವಿಕ್ರಿಯ ಖಾತೆಗೆ ಖರ್ಚು ಬರೆಯುವರು.

# ೯ನೆಯ ಪ್ರಕರಣ

---

## ಅವಲ ಅಥಾವೆ

ವರ್ಷಾರಂಭದ ದಿವಸ ಮಂದಿಯ ಕಡೆಯಿಂದ ತನಗೆ ಬರತಕ್ಕದ್ದೆಷ್ಟು ? ಹಾಗೂ ತಾನು ಮಂದಿಗೆ ಕೊಡತಕ್ಕದ್ದೆಷ್ಟು ? ಎಂಬುದು ತಿಳಿಯುವಕ್ಕಾಗಿ ಕಳೆದ ವರ್ಷದ ಅಖೈರ ಅಥಾವೆಯ ಮೇಲಿಂದ ಹೊಸ ಕೀರ್ದಿಯಲ್ಲಿ ಬರೆಯುವ ಜಮಾಖರ್ಚಿಗೆ **ಅವಲ ಅಥಾವೆ** ಅನ್ನುವರು.

ಅವಲ ಅಥಾವೆಯನ್ನು ಕೆಳಗೆ ಹೇಳಿದಂತೆ ಮಾಡುವರು.

(೧) **ಮೇಲ್ವಿಳಾಸ** :— ಮುಖಪೃಷ್ಠದಲ್ಲಿ ಕೀರ್ದಿಯ ಮೇಲ್ವಿಳಾಸವನ್ನು ಬರಕೊಂಡ ಬಳಿಕ, ಮುಂದಿನ ಪಾನಿನಲ್ಲಿ ಮೊದಲಿಗೆ ಶ್ರೀಕಾರವನ್ನು ಬರೆದು ಅದರ ಕೆಳಗೆ ಅವಲ ಅಥಾವೆ ಎಂದು ಬರೆಯುವರು.

(೨) **ಮುದ್ದತು** :— ಅದರ ಕೆಳಗೆ ವರ್ಷಾರಂಭದ ಮಿತಿಯನ್ನು ಬರೆಯುವರು.

(೩) **ರಕಮುಗಳ ಸ್ಥಳ**:—ಅದರ ಕೆಳಗೆ ಜಮೆಯ ಸದರಿನಲ್ಲಿ ಜಮಾ——ರೂ. ಖರ್ಚಿನ ಸದರಿನಲ್ಲಿ ಖರ್ಚು——ರೂ. ಎಂದು ಬರೆಯುವರು.

(೪) **ರಕಮುಗಳ ಅಂಕಿ** :—ಜನರಿಂದ ತನಗೆ ಬರತಕ್ಕ ರಕಮುಗಳನ್ನು ಆಯಾ ಖಾತೆಗಳಿಗೆ (೨೦೩—೨೦೯) ಖರ್ಚು ಬರೆದು, ಒಟ್ಟು ರಕಮನ್ನು ಖುದ್ದ ಖಾತೆಗೆ (೨೦೨) ಜಮಾ ಬರೆಯುವರು.

(೧೨೪) **ಅಖೈರ ಅಥಾವೆಗೂ ಅವಲ ಅಥಾವೆಗೂ ಇರುವ ಭೇದವು** :— (೧) ಅಖೈರ ಅಥಾವೆಯಲ್ಲಿ ಮಂದಿಯ ಕಡೆಯಿಂದ ತಮಗೆ ಬರತಕ್ಕ ರಕಮುಗಳು ಬಂದವೆಂದೆಣಿಸಿ, ಆಯಾ ಖಾತೆಗೆ ಜಮಾ ಹಿಡಿದು ಖುದ್ದ ಖಾತೆಗೆ ಖರ್ಚು ಬರೆಯುವರು. ಅವಲ ಅಥಾವೆಯಲ್ಲಿ ಮಂದಿಯ ಕಡೆಯಿಂದ ತಮಗೆ ಬರತಕ್ಕ ರಕಮುಗಳನ್ನು ಅವರವರ ಖಾತೆಗಳಿಗೆ ಖರ್ಚು ಬರೆದು ಒಟ್ಟು ರಕಮನ್ನು ಖುದ್ದ ಖಾತೆಗೆ ಜಮಾ ಹಿಡಿಯುವರು.

(೨) ಅಖೈರ ಅಥಾವೆಯಲ್ಲಿ ತಾವು ಮಂದಿಗೆ ಕೊಡತಕ್ಕ ರಕಮುಗಳನ್ನು ಕೊಟ್ಟೆವೆಂದೆಣಿಸಿ, ಅವರವರ ಖಾತೆಗಳಿಗೆ ಖರ್ಚು ಬರೆದು, ಖುದ್ದ ಖಾತೆಗೆ ಜಮಾ ಹಿಡಿಯುವರು. ಅವಲ ಅಥಾವೆಯಲ್ಲಿ ಮಂದಿಗೆ ಕೊಡತಕ್ಕ ರಕಮುಗಳನ್ನು ಅವರವರ ಖಾತೆಗಳಿಗೆ ಜಮಾ ಹಿಡಿದು ಖುದ್ದ ಖಾತೆಗೆ ಖರ್ಚು ಬರೆಯುವರು.

**ಸಾರಾಂಶ:— ಅಖೈರ ಅಢಾವೆಯು ವ್ಯತ್ಯಾಸವೇ ಅವಲ ಅಢಾವೆಯು.** ಯಾಕಂದರೆ ಅಖೈರ ಅಢಾವೆಯಲ್ಲಿ ಜಮಾ ಹಾಗು ಖರ್ಚು ಬರಕೊಂಡ ರಕಮು ಗಳು ಅನುಕ್ರಮವಾಗಿ ಅವಲ ಅಢಾವೆಯಲ್ಲಿ ಖರ್ಚು ಹಾಗು ಜಮೆಯ ರಕಮು ಗಳಾಗುವವು.

(೧೨೫) **ತಮ್ಮ ವ್ಯವಹಾರದ ಗುಟ್ಟು ಮಂದಿಗೆ ತಿಳಿಯಬಾರದೆಂದು ಬಯ ಸುವ ಸಾವುಕಾರರು ಕೀರ್ದಿಯಲ್ಲಿ ಅಖೈರ ಅಢಾವೆಯನ್ನೂ ಅವಲ ಅಢಾವೆ ಯನ್ನೂ ಬರೆಯುವದಿಲ್ಲ;** ಹಿಂದೆ ಹೇಳಿದಂತೆ **"ಅಢಾವೆ ಪಟ್ಟಿಯನ್ನು"** ತಯಾರಿಸಿ ಆ ಪಟ್ಟಿಯ ಪ್ರಕಾರ ಯಾವತ್ತೂ ಖಾತೆಗಳನ್ನು ಹೊಸ ಖತಾವಣಿಯಲ್ಲಿ ಹಾಕಿ, ಬರತಕ್ಕ ರಕಮುಗಳನ್ನು ಆಯಾ ಖಾತೆಗಳಲ್ಲಿ ಖರ್ಚಿನ ಕಡೆಗೆ ಹಾಗು ಕೊಡತಕ್ಕ ರಕಮು ಗಳನ್ನು ಆಯಾ ಖಾತೆಗಳಲ್ಲಿ ಜಮೆಯ ಕಡೆಗೆ ಬರೆದು, ಅವುಗಳ ಮುಂದೆ ಕಳೆದ ವರ್ಷದ ಬಾಕಿ ಎಂದು ಬರೆಯುವರು. ಇದರಿಂದ ವರ್ಷಾರಂಭ ದಿವಸದ ಆಯಾ ಖಾತೆಗಳ ಕೊಡಕೊಳ್ಳುವ ಬಾಕಿಯು ತಿಳಿಯುವದು.



# ೨ನೆಯ ಭಾಗ

## ಜಮಾಖರ್ಚಿನ ವಿಶೇಷ ಕಾಗದಗಳು

೧. ಶಿಲಕು ಬಂದ:— ಒಂದು ಬಿಡೀ ಕಾಗದದಲ್ಲಿ ಜಮೆಯ ರಕಮುಗಳನ್ನೂ, ಮತ್ತೊಂದು ಬಿಡೀ ಕಾಗದದಲ್ಲಿ ಖರ್ಚಿನ ರಕಮುಗಳನ್ನೂ ತಪಶೀಲವಾರ ಬರೆದು, ಇವೆರಡೂ ಕಾಗದಗಳನ್ನು ಒಂದರೊಳಗೊಂದು, ಸೇರಿಸಿ ಇಡುತ್ತಾರೆ. ಈ ಪ್ರಕಾರ ಇಟ್ಟ ಕಾಗದಗಳಿಗೆ "ಶಿಲಕು ಬಂದ" ಅನ್ನುವರು. (ಈಗ ಇದನ್ನು ಇಡುವ ರೂಢಿ ಕಡಿಮೆಯಾಗಿದೆ.)

ಕೆಲವು ಕಡೆಗೆ ಜಮಾಖರ್ಚಿನ ರಕಮುಗಳನ್ನು ಒಂದೇ ಕಾಗದದಲ್ಲಿಬರೆಯುವರು.

## ಕೀರ್ದಿಗೂ, ಶಿಲಕಬಂದಿಗೂ ಸಾಮ್ಯ—ವೈಷಮ್ಯಗಳು

ಸಾಮ್ಯ:— ಕೀರ್ದಿಯಲ್ಲಿಯೂ, ಶಿಲಕುಬಂದಿನಲ್ಲಿಯೂ ತಪಶೀಲವಾರ ಜಮಾಖರ್ಚು ಬರೆಯುವರು.

ವೈಷಮ್ಯ:— ಕೀರ್ದಿ ಹೊಲಿದಿರುವದು, ಶಿಲಕುಬಂದು ಹೊಲಿದಿರುವದಿಲ್ಲ.

ಕೀರ್ದಿಯಲ್ಲಿ ಜಮಾ ಹಾಗು ಖರ್ಚಿನ ರಕಮುಗಳು ಒಂದೇ ಕಾಗದದಲ್ಲಿರುವವು. ಶಿಲಕು ಬಂದಿನಲ್ಲಿ ಜಮೆ ಹಾಗೂ ಖರ್ಚಿನ ರಕಮುಗಳಿಗೆ ಬೇರೆಬೇರೆ ಕಾಗದಗಳಿರುವವು.

೨. ತಾಳೇಬಂದ:— ಕೀರ್ದಿಯ ಮೇಲಿಂದ ಅಥವಾ ಶಿಲಕುಬಂದಿನ ಮೇಲಿಂದ ತಿಂಗಳ ಅಥವಾ ವರ್ಷದ ಲೆಕ್ಕವನ್ನು (ಮಾಜೇರೀಜಿನ ರಕಮುಗಳನ್ನು ಬಿಟ್ಟು) ಬಾಯಿಗೂಡಿಸುವದಕ್ಕಾಗಿ ಬರೆದಿಟ್ಟ ಬಿಡಿ ಕಾಗದಕ್ಕೆ "ತಾಳೇಬಂದ" ಅನ್ನುವರು.

ಸೂಚನೆ:— ಈಗ ತಾಳೇಬಂದ ಪ್ರಚಾರದಲ್ಲಿರುವದಿಲ್ಲ.

೩. ಪಠಾಣವಹಿ:— ಇಸಮುವಾರ, ಜಿನಸುವಾರ, ಬಾಬವಾರ ಖಾತೆಗಳನ್ನು ಇಟ್ಟು ಅದರಲ್ಲಿ ತಪಶೀಲವಾರ ಜಮಾಖರ್ಚು ಬರೆದಿಡುವ ವಹಿಗೆ "ಪಠಾಣವಹಿ" ಅನ್ನುವರು. ಇದರಿಂದ ಪ್ರತಿ ಒಂದು ಇಸಮಿನ ಮತ್ತು ಪ್ರತಿ ಒಂದು ಬಾಬಿನ ಕೊಡಕೊಂಬುವದು ತಿಳಿಯುತದೆ. (ಪ್ರ, ೪ ಕ. ೨ ನೋಡಿರಿ.)

### ಪಠಾಣವಹಿಯ ನಮೂನೆ

### ಬಸಪ್ಪಾ ಗಡಾದ ಖಾತೆ

| ಜಮಾ | | ರೂ. | ಖರ್ಚು | | ರೂ. |
|---|---|---|---|---|---|
| ೬೦ | ರೋಖು ದಸ್ತ ಖುದ್ದ. | | ೮೦ | ಜೋಳ ಹೇರು ೮ ದರ ೧೩ ರೂ. | |
| ೧೪೦ | ಸೀರಿ ೧೪ ಚಂದ್ರಕಾಳಿ ದರ ೧೦ ರೂ. ಪ್ರ, ತಂದದ್ದು, ಕಾರ್ತೀಕ ಶು. ೧. | | | ಪ್ರ. ಮಾದಾಪ ಮಾಡಿದ್ದು. ಕಾರ್ತೀಕ ಶು. ೮. | |

| | | | |
|---|---|---|---|
| ೨೪ | ಚೆಲ್ಲ ಹೇರು ೨ ಪರ ೧೨ ರೂ. ಪ್ರ. ತಂದದ್ದು. ಕಾರ್ತೀಕ ಶು. ೫. | ೧೨೦ | ಸೀರಿ ೧೦ ಪರ ೧೨ ಚಂದ್ರಕಾಳಿ ಮಾರಿದ್ದು. ಕಾರ್ತೀಕ ಶು. ೧೦. |
| | ಒಟ್ಟು ೨೨೪. | | ಒಟ್ಟು ೩೦೦. |

## ಗಂಗಯ್ಯಾ ವಿಭೂತಿ ಖಾತೆ

| ಜಮಾ | ರೂ. | ಖರ್ಚು | ರೂ. |
|---|---|---|---|
| ೧೦೨॥೦ | ಸಾಲದ ಸಂಬಂಧ ವಸೂಲ ಬಂದದ್ದು. ಚೈ. ಶು. ೧. | ೩೫೦ | ಕಲ್ಲಪ್ಪಾ ಬಡಿಗೇರ ಇವರ ಕಡೆಯಿಂದ ಕತಬಿ ಬರೆಯಿಸಿಕೊಂಡು ಸಾಲಾ ಕೊಟ್ಟಿದ್ದು. ಬಡ್ಡಿಯು ಪರ ಶೇ. ೧।೦ ರೂ. ಪ್ರ. ಮಿತಿ ಚೈ. ಶು. ೧೫. |
| ೧೦೦ | ಸೀರಿ ೧೦ ಮುಂಗಿಚಿಕ್ಕಿ ಪರ ೧೦ ರೂ. ತಂದದ್ದು ಚೈತ್ರ ಬ. ೧. | ೨॥೦ | ಮನೆಯ ವೆಚ್ಚಕ್ಕಾಗಿ ಸಾಮಾನ ತರಿಸಿದ್ದು. ಮಿತಿ ಚೈತ್ರ ಶು. ೧೫. |
| | ಒಟ್ಟು ೨೦೨॥೦. | | ಒಟ್ಟು ೩೫೨॥೦ |

## (೪) ಮುಖ್ಯ ಜೀನಸಿನ ಜಮಾಖರ್ಚು

ಪ್ರತಿ ಒಂದು ಜೀನಸಿನ ಜಮೆ ಎಷ್ಟು? ಖರ್ಚು ಎಷ್ಟು? ಶಿಲುಕು ಎಷ್ಟು? ಎಂಬುವದು ತಿಳಿಯುವದಕ್ಕಾಗಿ ಯಾವ ವಹಿಯಲ್ಲಿ ಜಮಾ ಖರ್ಚು ಮಾಡುವರೋ. ಆ ವಹಿಗೆ "ಮುಖ್ಯ ಜೀನಸಿನ ಜಮಾಖರ್ಚು" ಅನ್ನುವರು. ಇವರಲ್ಲಿ ಮುಖ್ಯ ಜೀನಸಿನ ಕೀರ್ದಿಯೆಂತಲೂ, ಮುಖ್ಯ ಜೀನಸಿನ ಖತಾವಣಿಯೆಂತಲೂ ಎರಡು ಪ್ರಕಾರಗಳುಂಟು.

(೧) ಮಿತಿವಾರ ಜೀನಸಿನ ಜಮಾಖರ್ಚು ಬರೆದು ಶಿಲಕು ತೆಗೆಯುವ ವಹಿಗೆ **"ಮುಖ್ಯ ಜೀನಸಿನ ಕೀರ್ದಿ"** ಅನ್ನುವರು.

(೨) ಪ್ರತಿ ಒಂದು ಜೀನಸಿನ ಲೆಕ್ಕವು ಬೇರೆಬೇರೆ ತಿಳಿಯುವದಕ್ಕಾಗಿ ಇಟ್ಟ ಖಾತೆಗಳ ವಹಿಗೆ **"ವಖಾರಬುಕ್ಕು"** ಇಲ್ಲವೆ **"ಮುಖ್ಯ ಜೀನಸಿನ ಖತಾವಣಿ"** ಅನ್ನುವರು.

## ಮುಖ್ಯ ಮಾಲಿನ ಕೀರ್ದಿಯ ನಮೂನೆ

### ಚೈತ್ರಮಾಸ ಶಕೆ ೧೮೩೬

| ಜಮಾ ಹೇರು | | ಖರ್ಚು ಹೇರು | |
|---|---|---|---|
| ೨೦॥೦ | ಹಿಂದಿನ ವಿವರ. ಜೋಳ ಗೋದಿ ಕಡ್ಲಿ ೧೨ ೩॥೦ ೫ ಖಾ. ಪಾ. | ೮॥೦ | ಜೋಳ, ಮನೀ ಖರ್ಚಿಗಾಗಿ ತೆಗೆದುಕೊಂಡದ್ದು. ಮಿತಿ ಶು. ೫. ಖಾ. ಪಾ. |
| ೧೬॥೨ | ಹೊಲದ ಜೋಳ ಬಂದದ್ದು. ಶು. ೧೦. ಖಾ. ಪಾ. | ೧॥೦ | ಕಡ್ಲಿ, ಮನೀ ಖರ್ಚಿಗಾಗಿ ತೆಗೆದುಕೊಂಡದ್ದು ಮಿತಿ ಶು. ೧೦. ಖಾ. ಪಾ. |

೨||೪ ಹೊಲದ ಕಡ್ಲಿ ಬಂದದ್ದು.
ಶು. ೧೨.
ಖಾ. ಪಾ.

೧೦|೩ ಹೊಲದ ಗೋದಿ ಬಂದದ್ದು.
ಶು. ೧೫,
ಖಾ. ಪಾ.

ಒಟ್ಟು ೨೯||೧

೫೯||೧ ಅಂತು ಐವತ್ತು ಹೇರು
ಒಂದು ಚಿಟ್ಟಿ.

೫ ಗೋದಿ ಮಾರಾಟ ಮಾಡಿದ್ದು.
ಶು. ೧೨.
ಖಾ. ಪಾ.

೪|೦ ಜೋಳ ಕುರುಬರ ಕಲ್ಲನಿಗೆ ಪಾತ ದಂತೆ ಕೊಟ್ಟಿದ್ದು. ಹೇರಿಗೆ ೧೦ ಚಿಟ್ಟಿಯಂತೆ ಶು. ೧೫
ಖಾ. ಪಾ.

ಒಟ್ಟು ಖರ್ಚು ೧೪|೦
೩೧|||೧ ಶಿಲಕಿನ ವಿವರ.
೧೬|||೨ ಜೋಳ
೬೪ ಕಡ್ಲಿ
೮|||೩ ಗೋದಿ

೩೧|||೧
೫೯||೧ ಅಂತು ಐವತ್ತು ಹೇರು
ಒಂದು ಚಿಟ್ಟಿ.

## ವಖಾರ ಬುಕ್ಕು ಅಥವಾ ಮುಖ್ಯ ಜೀನಸಿನ ಖತಾವಣಿ

### ೧. ಜೋಳದ ಖಾತೆ

| ಜಮಾ ಹೇರು | | ಖರ್ಚು ಹೇರು | |
|---|---|---|---|
| ೧೨ | ಶಿಲಕು. | ೭||೦ | ಚೈ. ಶು. ೫ |
| ೧೬|||೨ | ಹೊಲದ ಉತ್ಪನ್ನ ಶು. ೧೦ | ೪| | ಮಾರಾಟ ಚೈತ್ರ ಶು. ೧೫ |

### ೨. ಗೋದಿಯ ಖಾತೆ

| ಜಮಾ | | ಖರ್ಚು | |
|---|---|---|---|
| ೩||೦ | ಶಿಲಕು. | ೫ | ಚೈತ್ರ ಶು. ೧.. |
| ೧೦|೩ | ಉತ್ಪನ್ನ ಶು. ೧೫ | | |

### ೩. ಕಡ್ಲಿಯ ಖಾತೆ

| ಜಮಾ | | ಖರ್ಚು | |
|---|---|---|---|
| ೫ | ಶಿಲಕು. | ೧||೦ | ಚೈತ್ರ ಶು. ೧೦. |
| ೨||೪ | ಉತ್ಪನ್ನ ಶು. ೧೨. | | |

## (೫) ಚೈಠೀ ಕೀರ್ದಿಯನ್ನು ಕುರಿತು

ಕೆಳಗಿನ ವ್ಯವಹಾರಗಳನ್ನು ಕುರಿತು (ಅ) ನ ಚೈಠೀ ಕೀರ್ದಿಯನ್ನು ತಯಾರ ಮಾಡಿರಿ:—

೧೦೦೦ ರೂ. ಹೋದ ತಿಂಗಳ ಶಿಲಕು.

೨೦ ರೂ. ಮಲ್ಲಪ್ಪ ನೂಲವಿ ಇವರಿಂದ ಹೊಲದ ಲಾವಣಿ ಬಂದದ್ದು. ಮಿ. ಚೈ. ಶು. ೧.

೨೫೦ ರೂ. ಗೋವಿಂದಪ್ಪಾ ಕಂಚಗಾರ ಇವರ ಕಡೆಯಿಂದ ಬರತಕ್ಕದ್ದರಲ್ಲಿ ೨೦೦ ರೂ. ರೋಖ ೫೦ ರೂ. ಬಡ್ಡಿ ಇದರಲ್ಲಿ ೫ ರೂ. ಸೂಟ ಹಿಡಿಸಿಕೊಂಡು ೨೪೫ ರೂ. ತಂದು ಕೊಟ್ಟನು. ಚೈತ್ರ ಶುದ್ಧ ೨.

೧೦೦ ರೂ. ಮಲ್ಲಪ್ಪಾ ನೂಲವಿ ಇವರ ಕಡೆಯಿಂದ ಕತಬಿ ಬರೆಯಿಸಿಕೊಂಡು ಸಾಲಾ ಕೊಟ್ಟಿತು. ಬಡ್ಡಿಯು ದರ ಶೇ. ೧ ರೂ. ಮಿತಿ ಚೈ. ಶು. ೫

೮೦೦ ರೂ. ದಾನಪ್ಪ ಜೋಳದ ಇವರಿಗೆ ಬಂಗಾರ ತೊಲಿ ೫ ದರ ೨೦ ರೂ. ಪ್ರಕಾರ ಉದ್ರಿ ಕೊಟ್ಟಿತು. ಚೈತ್ರ ಬ. ೧

೨೦೦ ಗುರಪ್ಪಾ ಗದಗ ಇವರು ಕೊಡತಕ್ಕ ರೂ. ಗಳಲ್ಲಿ ೧೫೦ ರೂ. ರೋಖ ಕೊಟ್ಟು ೫೦ ರೂ. ಗೋದಿ ಹೇರು ೪ ದರ ೧೨॥ ರೂ. ಕೊಟ್ಟರು. ಮಿತಿ ಚೈತ್ರ ಬ. ೧೦.

೨೦ ರೂ. ಕಳವಾಗಿ ಹೋದವು. ಮಿತಿ ಚೈತ್ರ ಬ. ೧೦

೫೦೦ ರೂ. ಗೋದಿ ಹೇರು ೫೦ ದರ ೧೦ ರೂ. ರೋಖ ಮಾರಿದೆವು. ೧೦ ರೂಪಾಯಿ ದಲಾಲಿ ಕೊಟ್ಟೆವು. ಚೈತ್ರ ಬ. ೧೨.

೩೫೦ ರೂ. ಶಿವಪ್ಪಾ ಜವಳಿ ಇವರು ಒಯ್ದ ಜವಳಿಯಲ್ಲಿ ೨೫೦ ರೂ. ರೋಖ ೫೦ ರೂ. ಜವಳಿ ತಿರುಗಿ ತಂದು ಕೊಟ್ಟರು. ಉಳಿದ ೫೦ ರೂ. ಗೆ ಕತಬಿ ಬರೆದು ಕೊಟ್ಟರು. ಚೈತ್ರ ಬ. ೩೦

### ಚೈಠೀ ಕೀರ್ದಿ ನಮೂನೆ (೧)

ಶ್ರೀ

(ಇಲ್ಲಿ ಕೀರ್ದಿ ಇಟ್ಟವನ ಹೆಸರು ಮುಂತಾದ್ದನ್ನು ಬರೆಯಬೇಕು)

ಶಕೆ ೧೮೩೬ ಆನಂದನಾಮ ಸಂವತ್ಸರ ಚೈತ್ರ ಶುದ್ಧ ೧ ಶುಕ್ರವಾರದಿಂದ
ಚೈತ್ರ ಬಹುಳ ೩೦ ಶನಿವಾರದ ವರೆಗೆ

| ಜಮಾ | ರೂ. | ಖರ್ಚು | ರೂ. |
|---|---|---|---|
| ೧೦೦೦ ಹೋದ ತಿಂಗಳ ಶಿಲಕು. | | ೫ ಸೂಟ ಖಾತೆ— ಗೋವಿಂದಪ್ಪ ಕಂಚಗಾರ ಇವರ ಹೆಸರಲೆ ಜಮಾ ಹಿಡಿದು ಮಿತಿ ಚೈತ್ರ ಶುದ್ಧ ೨. ಖಾ. ಪಾ. | |
| ೨೦ ಖುದ್ದ ಖಾತೆ— ಮಲ್ಲಪ್ಪಾ ನೂಲವಿ ಇವರ ಕಡೆಯಿಂದ ಹೊಲದ ಲಾವಣಿ ಬಾ. ಬಂದದ್ದು. ಮಿತಿ ಚೈತ್ರ ಶು. ೧. ಖಾ. ಪಾ. | | | |

೨೫೦ ಗೋವಿಂದಪ್ಪ ಕಂಚಗಾರ ಖಾತೆ— ಸದರಿಯವರ ಕಡೆಯಿಂದ ವಸೂಲು ಬಂದ ವಿವರ;
೨೦೦ ರೂಪಾಯಿ ಅಸಲು
೫೦ ರೂಪಾಯಿ ಬಡ್ಡಿ
೨೫೦ ರೂ.
೫ ರೂ. ಸೂಟಿ ಖಾತೆಗೆ ಖರ್ಚು.
೨೪೫ ಚೈತ್ರ ಶು. ೨, ಖಾ. ಪಾ.

---

೧೦೦ ಬಂಗಾರದ ಖಾತೆ—ತೊಲಿ ೫ ದರ ೨೦ ರೂ. ಪ್ರ. ದಾನಪ್ಪಾ ಜೋಳದ ಇವರ ಹೆಸರಿಗೆ ಖರ್ಚು ಬರೆದು.
ಮಿತಿ ಚೈತ್ರ ಬ. ೧ ಖಾ. ಪಾ.

---

೨೦೦ ಗುರಪ್ಪಾ ಗದಗ ಖಾತೆ— ಸದರಿಯವರಿಂದ ವಸೂಲಾದ ಹಣದ ವಿವರ:
೧೫೦ ರೂ. ರೋಖು.
೫೦ ರೂ. ಗೋದಿ ಹೇರು ೪ ದರ ೧೨॥ ರೂ. ಪ್ರಕಾರ ಧಾನ್ಯ ಖಾತೆಗೆ ಖರ್ಚು.
೨೦೦ ಚೈತ್ರ ಬ. ೧೦ ಖಾ. ಪಾ.

---

೫೦೦ ಧಾನ್ಯ ಖಾತೆ— ವಿವರ:
೪೯೦ ರೂ. ಗೋದಿ ಮಾರಿದ ಬಾಬತು.
೧೦ ದಲಾಲಿ ಕೊಟ್ಟಿದ್ದು. ದಲಾಲಿ ಖಾತೆಗೆ ಖರ್ಚು.
೫೦೦ ಚೈತ್ರ ಬ. ೧೨ ಖಾ. ಪಾ.

---

೩೫೦ ಶಿವಪ್ಪಾ ಜವಳಿ ಖಾತೆ—ಸದರಿಯವರ ಕಡೆಯಿಂದ ವಸೂಲಾದ ವಿವರ:
೨೫೦ ರೂ. ರೋಖು.
೫೦ ಜವಳಿ ತಿರುಗಿ ಬಂದ ಕಾರಣ ಜವಳಿ ಖಾತೆಗೆ ಖರ್ಚು
೫೦ ರೂ.ಗೆ ಕತಬಿ ಬರಕೊಟ್ಟದ್ದರಿಂದ ಸದರಿಯವರ ಹೆಸರಿಲೆ ಖರ್ಚು
೩೫೦ ಚೈತ್ರ ಬ. ೩೦ ಖಾ. ಪಾ.

---

೨೪೨೦ ಒಟ್ಟು ಜಮಾ

೧೦೦ ಮಲ್ಲಪ್ಪಾ ನೂಲವಿ ಖಾತೆ— ಸದರಿಯವರ ಕಡೆಯಿಂದ ಕತಬಿ ಬರೆಯಿಸಿಕೊಂಡು ಸಾಲ ಕೊಟ್ಟದ್ದು.
ಮಿತಿ ಚೈತ್ರ ಶು. ೫ ಖಾ. ಪಾ.

---

೧೦೦ ದಾನಪ್ಪಾ ಜೋಳದ ಖಾತೆ— ಬಂಗಾರ ತೊಲಿ ೫ ದರ ೨೦ ರೂ. ಪ್ರ. ಬಂಗಾರ ಖಾತೆಗೆ ಜಮಾ ಮಿತಿ ಚೈತ್ರ ಬ. ೧ ಖಾ. ಪಾ.

---

೫೦ ಧಾನ್ಯ ಖಾತೆ— ಗೋದಿ ಹೇರು ೪ ದರ ೧೨॥ ರೂ. ಪ್ರಕಾರ ಗುರಪ್ಪಾ ಗದಗ ಇವರ ಹೆಸರಲೆ ಜಮಾ ಹಿಡಿದು.
ಮಿತಿ ಚೈತ್ರ ಬ. ೧೦ ಖಾ. ಪಾ.

---

೨೦ ಖುದ್ದ ಖಾತೆ— ಅಂಗಡಿಯಲ್ಲಿ ಕಳವಾದದ್ದು.
ಮಿತಿ ಚೈತ್ರ ಬ. ೧೦ ಖಾ. ಪಾ.

---

೧೦ ದಲಾಲೀ ಖಾತೆ— ಗೋದಿ ಮಾರಾಟ ಮಾಡುವಾಗ ದಲಾಲಿ ಕೊಟ್ಟದ್ದು. ಧಾನ್ಯ ಖಾತೆಗೆ ಜಮಾ ಹಿಡಿದು
ಮಿತಿ ಚೈತ್ರ ಬ. ೧೨ ಖಾ. ಪಾ.

---

೫೦ ಜವಳಿ ಖಾತೆ— ಸೀರಿ ದರ ೧೦ ರೂ. ಪ್ರ. ಶಿವಪ್ಪಾ ಇವರ ಹೆಸರಿಲೆ ಜಮಾ.
ಚೈತ್ರ ಬ. ೩೦ ಖಾ. ಪಾ.

---

೫೦ ಶಿವಪ್ಪಾ ಜವಳಿ ಖಾತೆ—ಇವರ ಕಡೆಯಿಂದ ಬರತಕ್ಕ ಬಾಕಿಯ ಬಾ. ಕತಬಿ ಬರೆಯಿಸಿಕೊಂಡದ್ದು.
ಮಿತಿ ಚೈತ್ರ ಬ. ೩೦ ಖಾ. ಪಾ.

---

೩೮೫ ಒಟ್ಟು ಖರ್ಚು
೨೦೩೫ ಶಿಲಕು
೨೪೨೦ ಅಂತು.

೨೪೨೦ ಅಂತು ಇಪ್ಪತ್ತು ನಾಲ್ಕು ನೂರಾ ಇಪ್ಪತ್ತು ರೂ. ದಸ್ತೂರ ವೀರಪ್ಪ ಅಂಗಡಿ.

## ರೋಜಕೀರ್ದಿ

ಮಿತಿ ಕಾರ್ತಿಕ ಶುದ್ಧ ೧೦ ಶಕೆ ೧೮೩೬ ಆನಂದನಾಮ ಸಂವತ್ಸರ ತಾ॥ ೨೯-೧೦-೧೯೧೪ ಇಸ್ವಿ

**ಜಮಾ** — ರೂ.

/೧೦೫॥೦ ಹಿಂದಿನ ಶಿಲಕು

ಈ ಹೊತ್ತಿನ ಜಮೆ:

+೩೬ ಜಮಳೀ ಖಾತೆ— ಬಾಪುರಾವ ಲೋ-ಖಂಡೆ ಇವರು ೩೬ ರೂ. ಗೊಂಪು ಶಾಲು ಜೋಡು ಒಯ್ದು ಇವರಲ್ಲಿ ೩೦ ರೂ. ಕೊಟ್ಟು ಉಳಿದ ೬ ರೂ, ಬಾಕಿ ಮಾಡಿಕೊಂಡ ಕಾರಣ ಅವರ ಹೆಸರಿಲೆ ಖರ್ಚು.

×೫೦ ಗಂಗಯ್ಯ ವಿಭೂತಿ ಇವರು ಠೇವು ತಂದು ಇಟ್ಟಿದ್ದು (ತಿರುಗಿ ಒಯ್ದರು)

+೩೬ ×೪೮ ಜಮಳೀ ಖಾತೆ— ಶೀರಿ ೪ ದರ ೧೨ ರೂ. ಪ್ರಕಾರ ರೋಖು ಮಾರಿದ್ದು. (*ಶೀರಿ ೧ ಪರತ ಬಂದದ್ದು).

+೧೦॥೦ ಜಮಳೀ ಖಾತೆ— ಧೋತರ ಜೋಡು ೧ ದರ ೧೦॥ ರೂ. ಪ್ರ. ರೋಖು ಮಾರಿದ್ದು.

+೨೪ ಜಮಳೀ ಖಾತೆ— ಶಾಲು ಜೋಡು ೧ ದರ ೨೪ ರೂ. ಪ್ರ. ರೋಖು ಮಾರಿದ್ದು

೧೦೬॥೦ ಒಟ್ಟು.

**ಖರ್ಚು** — ರೂ.

ಈ ಹೊತ್ತಿನ ಖರ್ಚು:

/೬ ಬಾಪುರಾವ ಲೋಖಂಡೆ ಖಾತೆ— ಶಾಲು ಜೋಡಿನ ಬಾಬತು ಬಾಕಿ ಮಾಡಿಕೊಂಡದ್ದು ಜಮಳೀ ಖಾತೆಗೆ ಜಮಾ.

/೫॥ ಖುದ್ದ ಖಾತೆ— ಹೊಲದ ನಟ್ಟಿ ಕಟಿಸುವದಕ್ಕೆ ಕೊಟ್ಟದ್ದು.

/೪ ಧರ್ಮಾದಾಯ ಖಾತೆ— ಶಿವಲಿಂಗಯ್ಯನಿಗೆ ಲಗ್ನದ ಬಗ್ಗೆ ಕೊಟ್ಟದ್ದು.

೧೫॥೦ ಒಟ್ಟು.
೧೯೬॥೦ ನಾಳಿನ ಶಿಲಕು

೨೧೨ ಅಂತು.

೨೧೨ ಅಂತು, ಎರಡುನೂರಾ ಹನ್ನೆರಡು ರೂ. ದಸ್ತೂರ ವೀರಪ್ಪಾ ಅಂಗಡಿ.

---

ರೋಜಕೀರ್ದಿ ಬರೆಯುವಾಗ × ಗುರುತು ಮಾಡಿದ ರಕಮನ್ನು ಬಿಟ್ಟಿದೆ. ಶೀರಿ ೧ ಪರತ ಬಂದದ್ದರಿಂದ ೪೮ ರೂ. ಕಾಟು ಹಾಕಿ, ೩೬ ರೂ. ಬರೆದು ರೋಜಕೀರ್ದಿಯಲ್ಲಿ ಜಮಳೀ ಖಾತೆಗೆ ೩೬ ರೂ. ಹಿಡಿದಿದೆ. ಆದರೆ ೪೮ ರೂ. ಕಾಟು ಹಾಕದೆ, ಪರತ ಬಂದ *ಶೀರಿಯ ಬೆಲೆಯನ್ನು ಜಮಳೀ ಖಾತೆಗೆ ಖರ್ಚು ಹಾಕುವರು.

## ರೋಜಕೀರ್ದಿ

| ಜಮಾ | ರೂ. |
|---|---|
| ೧೦೫॥೦ | ಹಿಂದಿನ ಶಿಲಕು. |
| ೧೦೬॥೦ | ಜವಳೀ ಖಾತೆ— |
| | ೩೬ ಶಾಲು ಜೋಡು ೧ ದರ ೩೬ ರೂ. ಪ್ರ. ಇದರಲ್ಲಿ ೩೦ ರೂ. ರೋಖು ಕೊಟ್ಟು ೬ ರೂ. ಬಾಕಿ ಮಾಡಿ ಕೊಂಡ ಕಾರಣ ಬಾಪುರಾವ ಲೋಖಂಡೆ ಇವರ ಹೆಸರಿಲೆ ಖರ್ಚು. |
| | ೩೬ ಸೀರಿ ೩ ದರ ೧೨ ರೂ. ಪ್ರ. ರೋಖು ಮಾರಿದ್ದು. |
| | ೧೦॥ ಧೋತರ ಜೋಡು ೧ ದರ ೧೦॥ ರೂ. ಪ್ರ. ರೋಖು ಮಾರಿದ್ದು |
| | ೨೪ ಶಾಲು ಜೋಡು ೧ ದರ ೨೪ ರೂ. ಪ್ರ. ರೋಖು ಮಾರಿದ್ದು. |
| ೧೦೬॥೦ | ಖಾ. ಪಾ. |
| | ೧೦೬॥ ಒಟ್ಟು |
| ೨೧೨ | ಅಂತು ಎರಡುನೂರಾ ಹನ್ನೆರಡು ರೂ. |

| ಖರ್ಚು | ರೂ. |
|---|---|
| | ಈ ಹೊತ್ತಿನ ಖರ್ಚು: |
| ೬ | ಬಾಪುರಾವ ಲೋಖಂಡೆ ಖಾತೆ— ಶಾಲು ಜೋಡಿನ ಬಾಬತ ಬಾಕಿ ಮಾಡಿ ಕೊಂಡ ಕಾರಣ ಜವಳೀ ಖಾತೆಗೆ ಜಮಾ. ಖಾ. ಪಾ. |
| ೫॥೦ | ಖುದ್ದ ಖಾತೆ— ಹೊಲದ ನಟ್ಟು ಕಡಿಸಿದ್ದು. ಖಾ. ಪಾ. |
| ೪ | ಧರ್ಮಾದಾವ ಖಾತೆ— ಶಿವಲಿಂಗಯ್ಯನಿಗೆ ಲಗ್ನದ ದೆಸೆಯಿಂದ ಕೊಟ್ಟಿತು. ಖಾ. ಪಾ. |
| ೧೫॥೦ | ಒಟ್ಟು |
| ೧೯೬॥೦ | ನಾಳಿನ ಶಿಲಕು |
| ೨೧೨ | ಅಂತು |

ದಸ್ತೂರ ವೀರಪ್ಪಾ ಅಂಗಡಿ.

# ೩ ನೆಯ ಭಾಗ

---

## ಕೀರ್ದಿಯ ನಮೂನೆ

ರೋಜ ಕೀರ್ದಿ ಖಾಸಗತ ವೀರಪ್ಪಾ ಅಂಗಡಿ ಸಾ॥ ಹುಬ್ಬಳ್ಳಿ, ತಾ॥ ಹುಬ್ಬಳ್ಳಿ, ಜಿ॥ ಧಾರವಾಡ (ಮಿತಿ) ಶಕೆ ೧೮೩೬ ಆನಂದನಾಮ ಸಂವತ್ಸರ ಕಾರ್ತೀಕ ಶು. ೧ರಿಂದ ಶಕೆ ೧೮೩೭ ರಾಕ್ಷಸನಾಮ ಸಂವತ್ಸರ ಆಶ್ವೀಜ ಬ॥ ೩೦ರ ವರೆಗೆ.

## ಪ್ರಶ್ನೋತ್ತರ ಜಮಾಖರ್ಚು

### ೧ ನೆಯ ಪ್ರಶ್ನೆ

(೧) ವೀರಪ್ಪಾ ಅಂಗಡಿ ಇವರು ಈ ವರುಷ ಹೊಸದಾಗಿ ವ್ಯಾಪಾರ ಮಾಡುವದಕ್ಕಾಗಿ ೧೬೦೦ ರೂ. ಭಾಂಡವಲ ಹಾಕಿದರು. (೨) ಈ ಹೊತ್ತಿನ ದಿವಸ ಮಾಂಜರಪಾಟು ಥಾನು ೨೮ ದರ ೫ ರೂ. ಪ್ರ. ಬಂಗಾರ ತೊಲಿ ೧೫ ದರ ೨೦ ರೂ. ಪ್ರ. ರೋಖು ಖರೀದಿ ಮಾಡಿದರು. (೩) ಮಾಂಜರಪಾಟು ಥಾನು ೧೨ ದರ ೫ ರೂ. ಪ್ರಕಾರ ರಾಚಪ್ಪಾ ನವಲಗುಂದ ಇವರಲ್ಲಿ ಉದ್ರಿ ತಂದರು. ೮ ಹೇರು ಭತ್ತ ದರ ೫ ರೂ. ಪ್ರ. ಕರೆಪ್ಪಾ ನೊರಬ ಇವರಲ್ಲಿ ಉದ್ರಿ ತಂದರು. (೪) ಮಾಂಜರಪಾಟು ಥಾನು ೨೦ ದರ ೬। ರೂ.ಪ್ರ, ಗುರಪ್ಪಾ ಗೋಣಿ ಇವರಿಗೆ ಉದ್ರಿ ಕೊಟ್ಟರು. ಮಾಂಜರಪಾಟು ಥಾನು ೪ ದರ ೬। ರೂ. ಪ್ರ. ಪರಪ್ಪಾ ಲಕ್ಕುಂಡಿ ಇವರಿಗೆ ಉದ್ರಿ ಕೊಟ್ಟರು. (೫) ಭತ್ತ ಹೇರು ೩೨ ದರ ೫ ರೂ. ಪ್ರ. ರೋಖು ಖರೀದಿ ಮಾಡಿದರು. ಇವುಗಳ ಜಮಾಖರ್ಚು ತಯಾರು ಮಾಡಿರಿ.

## ಕೀರ್ದಿಯ ಪಾನು ೧.

### ಕಾರ್ತೀಕ ಮಾಸ ಶಕೆ ೧೮೩೬

ರೋಜಕೀರ್ದಿ

ಮಿತಿ ಕಾರ್ತೀಕ ಶು. ೧ ಮಂಗಳವಾರ ಶಕೆ ೧೮೩೬ ಆನಂದನಾಮ ಸಂವತ್ಸರ ತಾ॥ ೨೦-೧೦-೧೯೧೪ ಇ.

ಜಮೆ ______________ ರೂ.

ಈ ಹೊತ್ತಿನ ಜಮೆ

೧೬೦೦ ಖುದ್ದ ಖಾತೆ— ವ್ಯಾಪಾರದ ದೆಸೆಯಿಂದ ಭಾಂಡವಲ ಹಾಕಿದ್ದು.
ಖಾ. ಪಾ. ೩ ನಂ. ೧

ಖರ್ಚು ______________ ರೂ.

ಈ ಹೊತ್ತಿನ ಖರ್ಚು

೨೦೦ ಜವಳೀ ಖಾತೆ— ವಿವರ:
೧೪೦ ಮಾಂಜರಪಾಟು ಥಾನು ೨೮ ದರ ೫ ರೂ. ಪ್ರ. [illegible]

## ಪುರವಣಿ ಕೀರ್ದಿಯ ಪಾನು ೧.

೬೦ ರಾಚಪ್ಪಾ ನವಲಗುಂದ ಖಾತೆ—
ಮೂಂಜರಪಾಟ ಥಾನು ೧೨ ದರ ೫ರೂ.
ಪ್ರ, ಜವಳೀ ಖಾತೆಗೆ ಖರ್ಚು ಬರೆದು.
ಖಾ. ಪಾ. ೨ ನಂ. ೨

೪೦ ಕರೆಪ್ಪಾ ಮೊರಬ ಖಾತೆ—ಭತ್ತ ಹೇರು
೮ ದರ ೫ ರೂ. ಪ್ರ. ಧಾನ್ಯ ಖಾತೆಗೆ
ಖರ್ಚು ಬರೆದು.
ಖಾ. ಪಾ. ೩ ನಂ. ೩

೧೫೦ ಜವಳೀ ಖಾತೆ— ವಿಕರಿಯ ವಿವರ:
೧೨೫ ಮೂಂಜರಪಾಟು ಥಾನು ೨೦ ದರ ೬।ರೂ. ಪ್ರ. ಗುರಪ್ಪ ಗೋಣಿ ಇವರ ಹೆಸರಿಲೆ ಖರ್ಚು ಬರೆದು.
೨೫ ಮೂಂಜರ ಪಾಟು ಥಾನು ೪ ದರ ೬। ರೂ. ಪ್ರ. ಪರಪ್ಪಾ ಲಕ್ಕುಂಡಿ ಇವರ ಹೆಸರಿಲೆ ಖರ್ಚು ಬರೆದು.
೧೫೦
ಖಾ. ಪಾ. ೩ ನಂ. ೪

೨೫೦ ತಪಶೀಲು
೦ ರೋಖು
೨೫೦ ಪರಭಾರೆ
೨೫೦

೧೮೫೦ ಅಂತು ಹದಿನೆಂಟು ನೂರಾ ಐವತ್ತು ರೂ. ದಸ್ತೂರ ವೀರಪ್ಪ ಅಂಗಡಿ.

೬೦ ಮೂಂಜರಪಾಟು ಥಾನು ೧೨ ದರ ೫ ರೂ.ಪ್ರ. ರಾಚಪ್ಪ ನವಲಗುಂದ ಇವರ ಹೆಸರಿಲೆ ಜಮಾ ಹಿಡಿದು
೨೦೦
ಖಾ. ಪಾ. ೩ ನಂ. ೫

೩೦೦ ಬಂಗಾರ ಖಾತೆ— ತೊಲಿ ೧೫ ದರ ೨೦ ರೂ. ಪ್ರ. ರೋಖು ಖರೀದಿ.
ಖಾ. ಪಾ. ೩ ನಂ. ೬

೨೦೦ ಧಾನ್ಯ ಖಾತೆ— ಖರೀದಿಯ ವಿವರ:
೪೦ ಭತ್ತ ಹೇರು ೮ ದರ ೫ ರೂ. ಪ್ರ. ಕರೆಪ್ಪಾ ಮೊರಬ ಇವರ ಹೆಸರಿಲೆ ಜಮಾ ಹಿಡಿದು.
೧೬೦ ಭತ್ತ ಹೇರು ೩೨ ದರ ೫ ರೂ. ಪ್ರ. ರೋಖು ಖರೀದಿ ಮಾಡಿದ್ದು.
೨೦೦
ಖಾ. ಪಾ. ೩ ನಂ. ೭

೧೨೫ ಗುರಪ್ಪ ಗೋಣಿ ಖಾತೆ—
ಮೂಂಜರಪಾಟು ಥಾನು ೨೦ ದರ ೬। ರೂ. ಪ್ರ. ಜವಳೀ ಖಾತೆಗೆ ಜಮಾ ಹಿಡಿದು.
ಖಾ. ಪಾ. ೪ ನಂ. ೯

೨೫ ಪರಪ್ಪ ಲಕ್ಕುಂಡಿ ಖಾತೆ—
ಮೂಂಜರಪಾಟ ಥಾನು ೪ ದರ ೬। ರೂ. ಪ್ರ. ಜವಳೀ ಖಾತೆಗೆ ಜಮಾ ಹಿಡಿದು.
ಖಾ. ಪಾ. ೪ ನಂ. ೯

೮೫೦ ತಪಶೀಲು
೬೦೦ ರೋಖು
೨೫೦ ಪರಭಾರೆ
೮೫೦

೧೦೦೦ ನಾಳಿನ ಶಿಲಕು

೧೮೫೦ ಅಂತು ಹದಿನೆಂಟು ನೂರಾ ಐವತ್ತು ರೂ. ದಸ್ತೂರ ವೀರಪ್ಪ ಅಂಗಡಿ

# ಕೀರ್ದಿಯ ಸಾನು ೨.

## ೨ ನೆಯ ಪ್ರಶ್ನೆ

ಈ ಹೊತ್ತಿನ ದಿವಸ (೧) ಮಾಂಜರಪಾಟು ಥಾನು ೮ ದರ ೬। ರೂ. ಪ್ರ. ಗದಗಿನ ಗುರುರಾ ಯರಿಗೆ ಉದ್ರಿ ಕೊಟ್ಟೆವು. (೨) ಬಂಗಾರ ತೊಲಿ ೮ ದರ ೨೧ ರೂ. ಪ್ರ. ರೋಖು ಮಾರಿದೆವು. (೩) ಭತ್ತ ಹೇರು ೧೦ ದರ ೬ ರೂ. ಪ್ರ. ರೋಖು ಮಾರಿದೆವು. (೪) ಭತ್ತ ಹೇರು ೧೦ ದರ ೬ ರೂ. ಪ್ರ. ಚನ್ನಯ್ಯ ಕಂಬಿ ಇವರಿಗೆ ಉದ್ರಿ ಕೊಟ್ಟೆವು. (೫) ಗೋವಿಂದ ನಾಯಿಕ ಕರಿ ಇವರಲ್ಲಿ ೨॥ ತೊ ಬಂಗಾರ ದರ ೧೬ ರೂ. ಪ್ರ. ಉದ್ರಿ ತಂದೆವು. (೬) ೨೦೦ ರೂ. ರೋಖು ೩ ರೂ. ಖರ್ಚಿಗೆ ಕೊಟ್ಟು ಕಲಘಟಗಿಗೆ ಭತ್ತದ ಖರೀದಿಯ ದೆಸೆಯಿಂದ ಹಜರತ ಸಾಹೇಬನ ಕೂಡ ಕಳಿಸಿದೆವು. (೭) ೧ ರೂ. ರಾಮಶಾಸ್ತ್ರಿಗಳಿಗೆ ದೇಶಾವರೀ ಕೊಟ್ಟೆವು. ಇವುಗಳ ಜಮಾಖರ್ಚು ತಯಾರ ಮಾಡಿರಿ. ಹಿಂದಿನ ಶಿಲಕು ೧೦೦೦ ರೂ.

ರೋಜಕೀರ್ದಿ ಮಿತಿ ಕಾರ್ತಿಕ ಶು. ೨ ರಿಂದ ಕಾರ್ತಿಕ ಶು. ೧೧ ವರೆಗೆ ಜಮಾಖರ್ಚು (೧ ಶು. ೧೨ ಶುಕ್ರವಾರ ತಾ॥ ೩೦-೧೦-೧೯೧೪ ಇಸ್ವಿ

**ಜಮಾ — ರೂ.**

೧೦೦೦ ಹಿಂದಿನ ಶಿಲಕು

ಈ ಹೊತ್ತಿನ ಜಮೆ:

೫೦ ಜವಳೀ ಖಾತೆ—
ಮಾಂಜರಪಾಟು ಥಾನು ೮ ದರ ೬। ರೂ. ಪ್ರ. ಗುರುರಾವ ಗದಗ ಇವರ ಹೆಸರಿಲೆ ಖರ್ಚು ಬರೆದು.
ಖಾ. ಪಾ. ೩ ನಂ. ೧೦

೧೬೮ ಬಂಗಾರ ಖಾತೆ— ತೊಲಿ ೮ ದರ ೨೧ ರೂ. ಪ್ರ. ರೋಖು ಮಾರಿದ್ದು
ಖಾ. ಪಾ. ೩ ನಂ. ೧೧

೧೨೦ ಧಾನ್ಯ ಖಾತೆ— ವಿವರ:
೬೦ ಭತ್ತ ಹೇರು ೧೦ ದರ ೬ ರೂ. ಪ್ರ. ರೋಖು ಮಾರಿದ್ದು.
೬೦ ಭತ್ತ ಹೇರು ೧೦ ದರ ೬ ರೂ. ಪ್ರ. ಚನ್ನಯ್ಯ ಕಂಬಿ ಇವರ ಹೆಸರಿಲೆ ಖರ್ಚು ಬರೆದು.
೧೨೦
ಖಾ. ಪಾ. ೩ ನಂ. ೧೨

**ಖರ್ಚು — ರೂ.**

ಈ ಹೊತ್ತಿನ ಖರ್ಚು

೫೦ ಗುರುರಾವ ಗದಗ ಇವರ ಖಾತೆ—
ಮಾಂಜರಪಾಟು ಥಾನು ೮ ದರ ೬। ರೂ. ಪ್ರ. ಜವಳೀ ಖಾತೆಗೆ ಜಮಾ ಹಿಡಿದು.
ಖಾ; ಪಾ. ೪ ನಂ. ೧೪

೬೦ ಚನ್ನಯ್ಯ ಕಂಬಿ ಇವರ ಖಾತೆ—
ಭತ್ತ ಹೇರು ೧೨ ದರ ೫ ರೂ. ಪ್ರ. ಧಾನ್ಯ ಖಾತೆಗೆ ಜಮಾ ಹಿಡಿದು.
ಖಾ. ಪಾ. ೪ ನಂ. ೧೫

೨೦೩ ರವಾನಗಿ ಖಾತೆ— ಭತ್ತದ ಖರೀದಿಯ ದೆಸೆಯಿಂದ ಹಜರತ ಸಾಹೇಬ ಕೂಡ ಕಲಘಟಗಿಗೆ ಕಳಿಸಿದ ವಿವರ—
೨೦೦ ಭತ್ತದ ಖರೀದಿಗೆ
೩ ಹೊಟ್ಟೆಯ ಖರ್ಚಿಗೆ
೨೦೩
ಖಾ. ಪಾ. ೪ ನಂ. ೧೬

# ಕೀರ್ದಿಯ ಪಾನು ೩.

೪೦ ಗೋವಿಂದ ನಾಯಕ ಕರಿ ಖಾತೆ— ಬಂಗಾರ ತೊಲಿ ೨॥ ದರ ೧೬ ರೂ.ಪ್ರ. ಬಂಗಾರ ಖಾತೆಗೆ ಖರ್ಚು ಬರೆದು. ಖಾ. ಪಾ. ೪ ನಂ. ೧೩

೩೭೮ ತಪಶೀಲು
೨೨೮ ರೋಖು
೧೫೦ ಪರಭಾರೆ

೩೭೮

೧೩೭೮ ಅಂತು ಹದಿಮೂರು ನೂರಾ ಎಪ್ಪತ್ತೆಂಟು ರೂ. ದಸ್ತೂರ ವೀರಪ್ಪಾ ಅಂಗಡಿ.

೪೦ ಬಂಗಾರ ಖಾತೆ— ತೊಲಿ ೨॥ ದರ ೧೬ ರೂ. ಪ್ರ. ಗೋವಿಂದ ನಾಯಕ ಕರಿ ಇವರ ಹೆಸರಿಲೆ ಜಮಾ ಹಿಡಿದು. ಖಾ. ಪಾ. ೩ ನಂ. ೧೭

೧ ಧರ್ಮಾದಾವ ಖಾತೆ— ರಾಮಶಾಸ್ತ್ರಿಗಳಿಗೆ ದೇಶಾವರಿ ಕೊಟ್ಟದ್ದು; ಖಾ. ಪಾ. ೫ ನಂ. ೧೮

೩೫೪ ತಪಶೀಲು
೨೦೪ ರೋಖು
೧೫೦ ಪರಭಾರೆ

೩೫೪

೧೦೨೪ ನಾಳಿನ ಶಿಲಕು

೧೩೭೮ ಅಂತು ಹದಿಮೂರು ನೂರಾ ಎಪ್ಪತ್ತೆಂಟು ರೂ. ದಸ್ತೂರ ವೀರಪ್ಪಾ ಅಂಗಡಿ.

## ೩ ನೆಯ ಪ್ರಶ್ನೆ

ಈ ಹೊತ್ತಿನ ದಿವಸ (೧) ಭತ್ತದ ಖರೀದಿಯ ದೆಸೆಯಿಂದ ಕಳುಹಿಸಿದ ಹಜರತ ಸಾಹೇಬನು ಒಯ್ದು ೨೦೩ ರೂ. ಗಳಲ್ಲಿ ೩೦ ಹೇರು ಭತ್ತ ದರ ೫ ರೂ. ಪ್ರ. ಗಾಡೀ ಬಾಡಿಗೆ ೧೨॥ ರೂ. ಹೊಟ್ಟೆಯ ಖರ್ಚು ೧॥ ರೂ. ಶಹರ ಸುಂಕ ೨ ರೂ. ಕೊಟ್ಟು ಬಾಕಿ ಉಳಿದ ೩೭ ರೂ. ತಿರುಗಿ ತಂದು ಕೊಟ್ಟನು. (೨) ಆಲೂರ ಶಿವಪ್ಪನು ಶಿಪಾಯಿಯ ಕೂಡ ೧೦೦ ರೂ. ಕಳುಹಿಸಿದನು. ಪರಂತು ವ್ಯವಸ್ಥೆ ಬಗ್ಗೆ ಪತ್ರ ಬರೆಯಲಿಲ್ಲ. (೩) ಮಾಧವರಾಯರು ೧೦೦ಕ್ಕೆ ತಿಂಗಳಿಗೆ ೧ ರೂ. ಬಡ್ಡಿಯ ಕರಾರು ಮಾಡಿ ೧೦೦ ರೂ, ಠೇವು ತಂದು ಇಟ್ಟರು. (೪) ತೋಟದ ಬಾವಿಯ ದುರಸ್ತಿಯ ಬಗ್ಗೆ ವಡ್ಡರ ರಾಮನಕಡೆಗೆ ೧೦೦ ರೂ. ಮುಂಗಡ ಕೊಟ್ಟತು. (೫) ಮನೆಗೆ ೫ ರೂ. ಕಟ್ಟಿಗೆ ತರಿಸಿದೆವು. (೬) ೨೫ ರೂ. ಪರಪ್ಪ ಲಕ್ಕುಂಡಿ ಇವರ ಕಡೆಯಿಂದ ಜಮಾ ಬಂದವು. (೭) ಅಂಗಡಿಯ ದೆಸೆಯಿಂದ ೦॥೦ ರೂ, ಎಣ್ಣೆ ತರಿಸಿದೆವು. ಇವುಗಳ ಜಮಾಖರ್ಚು ತಯಾರ ಮಾಡಿರಿ. ಹಿಂದಿನ ಶಿಲಕು ೧೦೨೪.

ರೋಜಕೀರ್ದಿ ಮಿತಿ ಕಾರ್ತಿಕ ಶು. ೧೨ ರಿಂದ ಬ. ೧೦ ವರೆಗೆ ಜಮಾಖರ್ಚು (೦) ಬ. ೧೧ ಶನಿವಾರ ತಾ॥ ೧೪—೧೧—೧೯೧೪ ಇಸ್ವಿ.

# ಕೀರ್ದಿಯ ಪಾನು ೪.

**ಜಮಾ** ರೂ.

೧೦೨೪ ಹಿಂದಿನ ಶಿಲಕು

ಈ ಹೊತ್ತಿನ ಜಮೆ:

೨೦೩ ರವಾನಗಿ ಖಾತೆ— ಹಜರತ ಸಾಹೇಬನು ಕಲಘಟಗಿಯಿಂದ ಭತ್ತ ಖರೀದಿ ಮಾಡಿ ತಂದ ವಿವರ:

೧೫೦ ಭತ್ತ ಹೇರು ೩೦ ದರ ೫ ರೂ. ಪ್ರ. ಧಾನ್ಯ ಖಾತೆಗೆ ಖರ್ಚು ಬರೆದು.

೧೨॥ ಗಾಡೀ ಬಾಡಿಗಿ, ಬಾಡಿಗಿ ಖಾತೆಗೆ ಖರ್ಚು.

೧॥ ಹೊಟ್ಟೆಯ ಖರ್ಚು, ಬಾಡಿಗಿ ಖಾತೆಗೆ ಖರ್ಚು.

೨ ಶಹರ ಸುಂಕ ಬಾ. ಖಾ. ಖ.

೩೭ ತಿರುಗಿ ತಂದು ಕೊಟ್ಟದ್ದು.

೨೦೩

ಖಾ. ಪಾ. ೪ ನಂ. ೧೯

೧೦೦ ಅಮಾನತ ಖಾತೆ— ಶಿವಪ್ಪ ಅಲೂರ ಇವರು ಶಿಪಾಯಿಯ ಕೂಡ ಮೋಘಮ ಹಣ ಕಳುಹಿಸಿದ ಕಾರಣ ಈ ಖಾತೆಗೆ ಜಮಾ.

ಖಾ. ಪಾ. ೫ ನಂ. ೨೦

೧೦೦ ಠೇವ ಖಾತೆ—ಮಾಧವರಾಯರು ಠೇವು ತಂದು ಇಟ್ಟದ್ದು. ಬಡ್ಡಿಯ ದರ ಶೇ. ೧ ರೂ. ಪ್ರ.

ಖಾ. ಪಾ. ೫ ನಂ. ೨೧

೨೫ ಪರಪ್ಪಾ ಲಕ್ಕುಂಡಿ ಇವರ ಖಾತೆ— ಇವರ ಕಡೆಯಿಂದ ಬಾಕಿಯ ಬಾ. ಬಂದದ್ದು.

ಖಾ. ಪಾ. ೪ ನಂ. ೨೨

**ಖರ್ಚು** ರೂ.

ಈ ಹೊತ್ತಿನ ಖರ್ಚು:

೧೫೦ ಧಾನ್ಯ ಖಾತೆ— ಭತ್ತ ಹೇರು ೩೦ ದರ ೫ ರೂ. ಪ್ರ. ರವಾನಗಿ ಖಾತೆಗೆ ಜಮಾ ಹಿಡಿದು.

ಖಾ. ಪಾ. ೩ ನಂ. ೨೩

೧೬ ಬಾಡಿಗಿ ಖಾತೆ — ಕಲಘಟಗಿಯಿಂದ ಭತ್ತ ತರಿಸಿದ ಬಾ. ಗಾಡೀ ಬಾಡಿಗಿ ಮುಂತಾದ್ದು ಕೊಟ್ಟದ್ದು. ರವಾನಗಿ ಖಾತೆಗೆ ಜಮಾ ಹಿಡಿದು.

ಖಾ. ಪಾ. ೫ ನಂ. ೨೪

೧೦೦ ತಸಲಮಾತ ಖಾತೆ— ತೋಟದ ಭಾವಿಯ ದುರಸ್ತಿಯ ಭಗ್ಗೆ ವಡ್ಡರ ರಾಮನಿಗೆ ಮುಂಗಡ ಕೊಟ್ಟದ್ದು.

ಖಾ. ಪಾ. ೫ ನಂ. ೨೫

೫ ಮನೀ ಖರ್ಚು ಖಾತೆ— ಮನೆಯ ಬಗ್ಗೆ ಕಟ್ಟಿಗಿ ತರಿಸಿದ್ದು.

ಖಾ. ಪಾ. ೫ ನಂ. ೨೬

೦॥೦ ಸಾದಿಲವಾರ ಖಾತೆ— ಅಂಗಡಿಯ ದೆಸೆಯಿಂದ ಎಣ್ಣೀ ತರಿಸಿದ್ದು.

ಖಾ. ಪಾ. ೬ ನಂ. ೨೭

೨೭೧॥೦ ತಪಶೀಲು

೧೦೫॥೦ ರೋಖು

೧೬೬ ಪರಭಾರೆ

೨೭೧॥೦

# ಕೀರ್ದಿಯ ಪಾನು ೫.

೪೨೮ ತಪಶೀಲು

೨೬.೨ ರೋಖು
೧೬.೬ ಪರಭಾರೆ

೪೨.೮

೧೪೫೨ ಅಂತು ಹದಿನಾಲ್ಕು ನೂರಾ ಐವತ್ತೆರಡು ರೂ. ದಸ್ತೂರ ವೀರಪ್ಪ ಅಂಗಡಿ.

೧೧೮೦॥ ನಾಳಿನ ಶಿಲಕು

೧೪೫೨ ಅಂತು ಹದಿನಾಲ್ಕು ನೂರಾ ಐವತ್ತೆರಡು ರೂ. ದಸ್ತೂರ ವೀರಪ್ಪ ಅಂಗಡಿ.

## ೪ ನೆಯ ಪ್ರಶ್ನ

ಈ ಹೊತ್ತಿನ ದಿವಸ (೧) ಶಿವಪ್ಪಾ ಆಲೂರ ಇವರು ಪೋಷ್ಟಮ ಕಳುಹಿಸಿದ ೧೦೦ ರೂ. ಗಳಲ್ಲಿ ೬೦ ರೂ. ಚೆನ್ನಯ್ಯಾ ಕಂಬಿ ಇವರ ಹೆಸರಿಲೆ ರೂ ೪೦. ಕರೆಪ್ಪಾ ಮೊರಬ ಇವರ ಹೆಸರಿಲೆ ಜಮಾ ಹಿಡಿಯಬೇಕೆಂದು ಪತ್ರ ಬರೆದರು. (೨) ವಡ್ಡರ ರಾಮನು ಭಾವಿ ದುರಸ್ತ ಮಾಡಿಸಿ, ೫ ರೂ. ತಾನು ಬಳಿಯಿಸಿಕೊಂಡು ೫ ರೂ. ತಿರುಗಿ ತಂದು ಕೊಟ್ಟನು. (೩) ಬಂಗಾರ ತೊಲಿ ೨॥ ದರ ೧೬ ರೂ. ಪ್ರ. ಒಳಗಡೆಕರಿ ಇವರಲ್ಲಿ ಖರೀದಿ ಮಾಡಿದ್ದು ಮನೆಗೆ ಬಿಂದಲಿ ಮಾಡಿಸಲಿಕ್ಕೆ ಕೊಟ್ಟಿತು. ಇವುಗಳ ಜಮಾಖರ್ಚು ತಯಾರ ಮಾಡಿರಿ. ಹಿಂದಿನ ಶಿಲಕು ೧೧೮೦॥.

ರೋಜಕೀರ್ದಿ ಮಿತಿ ಕಾರ್ತಿಕ ಬ. ೧೨ ರವಿವಾರ ಶಕೆ ೧೮೩೬ ಆನಂದನಾಮ ಸಂವತ್ಸರ ತಾ॥ ೧೫—೧೧—೧೯೧೪ ಇಸ್ವಿ.

**ಜಮಾ — ರೂ.**

೧೧೮೦॥೦ ಹಿಂದಿನ ಶಿಲಕು

ಈ ಹೊತ್ತಿನ ಜಮೆ:

೬೦ ಚೆನ್ನಯ್ಯಾ ಕಂಬಿ ಇವರ ಖಾತೆ— ಆಲೂರ ಶಿವಪ್ಪನ ಕಡೆಯಿಂದ ಪತ್ರ ಬಂದ ಪ್ರ. ಅಮಾನತ ಖಾತೆಗೆ ಖರ್ಚು ಬರೆದು.
ಖಾ. ಪಾ. ೪ ನಂ. ೨೮

೪೦ ಕರೆಪ್ಪಾ ಮೊರಬ ಇವರ ಖಾತೆ— ಆಲೂರ ಶಿವಪ್ಪನ ಕಡೆಯಿಂದ ಪತ್ರ ಬಂದ ಪ್ರ. ಅಮಾನತ ಖಾತೆಗೆ ಖರ್ಚು ಬರೆದು.
ಖಾ. ಪಾ. ೩ ನಂ. ೨೯

**ಖರ್ಚು — ರೂ.**

ಈ ಹೊತ್ತಿನ ಖರ್ಚು:

೧೦೦ ಅಮಾನತ ಖಾತೆ— ಆಲೂರ ಶಿವಪ್ಪನ ಕಡೆಯಿಂದ ಪತ್ರ ಬಂದ ಪ್ರಕಾರ ಅವರ ರವರ ಖಾತೆಗೆ ಜಮಾ ಹಿಡಿದ ವಿವರ—
೬೦ ಚೆನ್ನಯ್ಯಾ ಕಂಬಿ
೪೦ ಕರೆಪ್ಪ ಮೊರಬ

೧೦೦ ಖಾ. ಪಾ. ೫ ನಂ. ೩೨

೯೦ ಖುದ್ದ ಖಾತೆ— ತೋಟದ ಭಾವೀ ದುರಸ್ತಿಯ ಬಗ್ಗೆ ಖರ್ಚಾದದ್ದು. ತಸಲಮಾತ ಖಾತೆಗೆ ಜಮಾ ಹಿಡಿದು.
ಖಾ. ಪಾ. ೨ ನಂ. ೩೩

# ಕೀರ್ದಿಯ ಪಾನು ೬.

೧೦೦ ತಸಲಮಾತ ಖಾತೆ—ತೋಟದ ಭಾವಿ ದುರಸ್ತಿಯ ಬಗ್ಗೆ ಮುಂಗಡ ಕೊಟ್ಟ ಬಾ. ಖರ್ಚಾದ ವಿವರ:

೯೦ ಭಾವಿ ದುರಸ್ತಿಯ ಬಗ್ಗೆ ಖರ್ಚಾದ ಕಾರಣ ಖುದ್ದ ಖಾತೆಗೆ ಖರ್ಚು ಬರೆದು.

೫ ವಡ್ಡರ ರಾಮನು ಬಳಸಿಕೊಂಡ ಕಾರಣ ಅವನ ಹೆಸರಿಲೆ ಖರ್ಚು ಬರೆದು.

೫ ತಿರುಗಿ ಬಂದದ್ದು.

೧೦೦

ಖಾ. ಪಾ. ೫ ನಂ. ೩೦

೪೦ ಬಂಗಾರ ಖಾತೆ—ತೊಲಿ ೨॥ ದರ ೧೬ ರೂ. ಪ್ರ. ಮನೆಗೆ ಬಿಂದಲಿ ಮಾಡಿಸಲಿಕ್ಕೆ ತೆಗೆದುಕೊಂಡ ಕಾರಣ ಮನೆ ಖರ್ಚು ಖಾತೆಗೆ ಖರ್ಚು ಬರೆದು.

ಖಾ. ಪಾ. ೩ ನಂ. ೩೧

೨೪೦ ತಪಶೀಲು

೫ ರೋಖು

೨೩೫ ಪರಭಾರೆ

೨೪೦

೧೪೨೦॥೦ ಅಂತು ಹದಿನಾಲ್ಕು ನೂರಾ ಇಪ್ಪತ್ತು ವರಿ ರೂ. ದಸ್ತೂರ ವೀರಪ್ಪಾ ಅಂಗಡಿ

೫ ರಾಮಾ ವಡ್ಡರ ಖಾತೆ— ತೋಟದ ಭಾವಿ ದುರಸ್ತಿಯ ಬಗ್ಗೆ ಕೊಟ್ಟದ್ದರಲ್ಲಿ ಬಳಸಿಕೊಂಡದ್ದು, ತಸಲಮಾತ ಖಾತೆಗೆ ಜಮಾ.

ಖಾ. ಪಾ. ೬ ನಂ. ೨೪

೪೦ ಮನೆಖರ್ಚು ಖಾತೆ—ಬಂಗಾರ ತೊಲಿ ೨॥ ದರ ೧೬ ರೂ. ಪ್ರ. ಮನೆಗೆ ಬಿಂದಲಿ ಮಾಡಿಸಿದ ಕಾರಣ ಬಂಗಾರ ಖಾತೆಗೆ ಜಮಾ ಹಿಡಿದು.

ಖಾ. ಪಾ. ೫ ನಂ. ೩೫

೨೩೫ ತಪಶೀಲು

೦ ರೋಖು

೨೩೫ ಪರಭಾರೆ

೨೩೫

೧೧೮೫॥೦ ನಾಳಿನ ಶಿಲಕು

೧೪೨೦॥೦ ಅಂತು ಹದಿನಾಲ್ಕು ನೂರಾ ಇಪ್ಪತ್ತು ವರಿ ರೂ. ದಸ್ತೂರ ವೀರಪ್ಪಾ ಅಂಗಡಿ.

# ಕೀರ್ದಿಯ ತಿಂಗಳ ತೇರೀಜು

## ಕಾರ್ತೀಕ ಮಾಸ ಶಕೆ ೧೮೩೬

| | ಜಮಾ ರೂ. | ಖರ್ಚು ರೂ. |
|---|---|---|
| ಕಾರ್ತೀಕ ಶು. ೧ | ೨೫೦ | ೮೫೦ |
| ಕಾರ್ತೀಕ ಶು. ೧೨ | ೩೭೮ | ೩೫೪ |
| ಕಾರ್ತೀಕ ಬ. ೧೧ | ೪೨೮ | ೨೭೧॥೦ |

# ಕೀರ್ದಿಯ ಪಾನು ೭.

| ಕಾರ್ತೀಕ ಬ. ೧೨ | ೨೪೦ | | ೨೩೫ |
|---|---|---|---|
| ವರ್ಷದ ಆರಂಭದ | *೧೨೯೬ | | †೧೭೧೦॥ |
| ಶಿಲಕು | ೧೬೦೦ | ತಿಂ. ಕೊ. ಶಿ. | ೧೧೮೫॥ |
| | ೨೮೯೬ | | ೨೮೯೬ |

## ಖತಾವಣಿಯ ತಿಂಗಳ ತೇರೀಜು

### ಕಾರ್ತೀಕ ಮಾಸ ಶಕೆ ೧೮೩೬

| | ಜಮಾ ರೂ. | ಖರ್ಚು ರೂ. |
|---|---|---|
| ಖುದ್ದ ಖಾತೆಗೆ .... .... | ೦ | ೯೦ |
| ರಾಚಪ್ಪಾ ನವಲಗುಂದ .... .... | ೬೦ | ೦ |
| ಕರೆಪ್ಪಾ ಮೊರಬ .... .... | ೮೦ | ೦ |
| ಜವಳೀ ಖಾತೆ .... .... | ೨೦೦ | ೨೦೦ |
| ಬಂಗಾರ ಖಾತೆ .... .... | ೨೦೮ | ೩೪೦ |
| ಧಾನ್ಯ ಖಾತೆ .... .... | ೧೨೦ | ೩೫೦ |
| ಗುರಪ್ಪಾ ಗೋಣಿ .... .... | ೦ | ೧೨೫ |
| ಪರಪ್ಪಾ ಲಕ್ಕುಂಡಿ .... .... | ೨೫ | ೨೫ |
| ಗೋವಿಂದ ನಾಯಕ ಕರಿ .... .... | ೪೦ | ೦ |
| ಗುರುರಾವ ಗದಗ .... .... | ೦ | ೫೦ |
| ಚನ್ನಯ್ಯಾ ಕಂಬಿ .... .... | ೬೦ | ೬೦ |
| ರವಾನಗಿ ಖಾತೆ .... .... | ೨೦೩ | ೨೦೩ |
| ಧರ್ಮಾದಾವ ಖಾತೆ .... .... | ೦ | ೧ |
| ಅಮಾನತ ಖಾತೆ .... .... | ೧೦೦ | ೧೦೦ |
| ಶೀವ ಖಾತೆ .... .... | ೧೦೦ | ೦ |
| ಬಾಡಗಿ ಖಾತೆ .... .... | ೦ | ೧೬ |
| ತಸಲಮಾತ ಖಾತೆ .... .... | ೧೦೦ | ೧೦೦ |
| ಮನೆಖರ್ಚು ಖಾತೆ .... .... | ೦ | ೪೫ |
| ರಾಮಾ ವಡ್ಡರ ಖಾತೆ .... .... | ೦ | ೫ |
| ಸಾದಿಲವಾರ ಖಾತೆ .... .... | ೦ | ೦॥೦ |
| | *೧೨೯೬ | †೧೭೧೦॥೦ |

*ಈ ರಕಮುಗಳು ಖತಾವಣಿಯ ಜೇರೀಜಿನ ಜಮೆಯು ಮತ್ತು ಖರ್ಚಿನ ಜೇರೀಜಿಗೆ ಸರಿಯಾಗಿರುವವು
†ಈ ಜೇರೀಜಿನ ರಕಮುಗಳು ಕೀರ್ದಿಯ ಹಿಂದಿನ ಜೇರೀಜಿಗೆ (ಶಿಲಕಿನ ಹೊರ್ತು) ಸರಿಯಾಗಿರುವವು

# ಕೀರ್ದಿಯ ಪಾನು ೮.

## ಮಾರ್ಗಶೀರ್ಷ ಮಾಸ ಶಕೆ ೧೮೩೬

### ೫ನೆಯ ಪ್ರಶ್ನೆ

ಈ ಹೊತ್ತಿನ ದಿವಸ (೧) ಶಿರಸಪ್ಪಾ ಪ್ರಥಮಶೆಟ್ಟಿ ಇವರ ಕಡೆಯಿಂದ ೨೦೦ ರೂ. ರೋಖು ತೆಗೆದುಕೊಂಡು, ಮುಂಬಯಿಅಡತದಾರ ಸಖಾರಾಮ ಮನಸಾರಾಮ ಶೇಟ ಇವರ ಮೇಲೆ೧೬ ದಿವಸಗಳ ಮುದತಿ ಹುಂಡೀ ಬರಕೊಟ್ಟೆವು. ಹುಂಡಾವಳಿಯ ದರ ನೂರಕ್ಕೆ ೧ ರೂ. ಮೇಲು. (೨) ಚನ್ನಪ್ಪಾ ಶಿರೂರ ಇವರ ಕಡೆಯಿಂದ ೨೦೦ ರೂ. ರೋಖು ತೆಗೆದುಕೊಂಡು ಪುಣೆಯ ಆಡತದಾರ ರಾಮಜಿ ಶೇಟ ಇವರ ಮೇಲೆ ದರ್ಶನೀ ಹುಂಡಿ ಬರಕೊಟ್ಟೆವು. ಹುಂಡಾವಳಿಯ ದರ ನೂರಕ್ಕೆ ೧ ರೂ. ಮೇಲು. (೩) ಸೋಮಪ್ಪಾ ಶಿಂದಗಿ ಇವರ ಕಡೆಯಿಂದ ೨೦೦ ರೂ. ರೋಖು ತೆಗೆದುಕೊಂಡು ಬೆಳಗಾವಿ ಅಡತದಾರ ಶಿವಲಿಂಗಪ್ಪಾ ಬೋಳಮಲ್ಲ ಇವರ ಮೇಲೆ ೧೬ ದಿವಸಗಳ ಮುದತಿ ಹುಂಡೀ ಬರಕೊಟ್ಟೆವು. ಹುಂಡಾವಳಿಯ ದರ ನೂರಕ್ಕೆ ೮ ಆಣೆ ಮೇಲು. (೪) ೧೫೦ ರೂ. ಬಾಳಾಚಾರ್ಯ ಹೆಬಸೂರ ಇವರ ಕಡೆಯಿಂದ ಕತಬೀ ಬರೆಯಿಸಿಕೊಂಡು ಸಾಲಾ ಕೊಟ್ಟೆವು. ಬಡ್ಡಿಯ ದರ ನೂರಕ್ಕೆ ೧ ರೂ. ಯಂತ್ರೆ (೫) ೬೦ ರೂ. ರಾಚಪ್ಪಾ ನವಲಗುಂದ ಮತ್ತು ೪೦ ರೂ. ಕರೆಪ್ಪಾ ಮೊರಬ ಇವರಿಗೆ ಬಾಕಿ ಕೊಡತಕ್ಕದ್ದು ಕೊಟ್ಟೆತು. (೬) ೪೦ ರೂ. ಗೋವಿಂದನಾಯಕ ಕರಿ ಇವರ ಕಡೆಗೆ ಬಂಗಾರ ತಂದ ಬಾಬತು ಕೊಟ್ಟೆವು. (೭) ೮ ಆಣೆ ಅಂಗಡಿಯ ದೆಸೆಯಿಂದ ಎಣ್ಣೆ ತರಿಸಿದೆವು. ಇವುಗಳ ಜಮಾಖರ್ಚು ತಯಾರ ಮಾಡಿರಿ. ಹೋದ ತಿಂಗಳ ಶಿಲಕು ೧೧೮೫॥ ರೂ.

ರೋಜಕೀರ್ದಿ ಮಿತಿ ಮಾರ್ಗಶೀರ್ಷ ಶುದ್ಧ ೧ ಬುಧವಾರ ಶಕೆ ೧೮೩೬ ಆನಂದನಾಮ ಸಂವತ್ಸರ ತಾ॥ ೧೦—೧೧—೧೯೧೪ ಇಸ್ವಿ.

| ಜಮಾ | | ರೂ. | ಖರ್ಚು | | ರೂ. |
|---|---|---|---|---|---|
| ೧೧೮೫॥ | ಹೋದ ತಿಂಗಳ ಶಿಲಕು | | | ಈ ಹೊತ್ತಿನ ಖರ್ಚು: | |
| | ಈ ಹೊತ್ತಿನ ಜಮೆ: | | ೧೫೦ | ಬಾಳಾಚಾರ್ಯ ಹೆಬಸೂರ ಇವರ ಖಾತೆ—ಸದರಿಯವರಿಗೆ ನೂರಕ್ಕೆ ತಿಂಗಳಿಗೆ ೧ ರೂ. ಬಡ್ಡೀ ಕರಾರು ಮಾಡಿ ಕತಬಿ ಬರೆಯಿಸಿಕೊಂಡು ಸಾಲಾ ಕೊಟ್ಟದ್ದು. ಖಾ. ಪಾ. ೭ ನಂ. ೪೦ | |
| ೨೦೦ | ಸಖಾರಾಮ ಮನಸಾರಾಮ ಶೇಟ ಮುಂಬಯಿ ಇವರ ಖಾತೆ— ನಿಮ್ಮ ಮೇಲೆ ನರಸಪ್ಪಾ ಪ್ರಥಮಶೆಟ್ಟಿ ಇವರ ರಾಖಲೆಯಿಂದ ಬರೆದ ಮುದತಿ ಹುಂಡಿ ಕಳಿಸಿದೆ. ಹುಂಡಾವಳಿ ದರ ನೂರಕ್ಕೆ ೧ ರೂ. ಮೇಲು. ಖಾ. ಪಾ. ೬ ನಂ. ೩೬ | | ೬೦ | ರಾಚಪ್ಪಾ ನವಲಗುಂದ ಇವರ ಖಾತೆ— ಸದರಿಯವರಿಗೆ ಬಾಕಿ ಬಾ. ಕೊಟ್ಟದ್ದು. ಖಾ. ಪಾ. ೨ ನಂ. ೪೧ | |
| ೨೦೦ | ಹುಂಡೀ ಖಾತೆ— ಚನ್ನಪ್ಪಾ ಶಿರೂರ ಇವರ ರಾಖಲೆಯಿಂದ ಪುಣೆಯ ಆಡತದಾರ ರಾಮಜೀಶೇಟ ಇವರ ಮೇಲೆ ದರ್ಶನಿ ಹುಂಡಿ ಕಳಿಸಿದೆ. ಹುಂಡಾವಳಿ ದರ ನೂರಕ್ಕೆ ೧ ರೂ. ಮೇಲು. ಖಾ. ಪಾ. ೬ ನಂ. ೩೭ | | ೪೦ | ಕರೆಪ್ಪಾ ಮೊರಬ ಇವರ ಖಾತೆ—ಸದರಿಯವರಿಗೆ ಬಾಕಿ ಬಾ. ಕೊಟ್ಟದ್ದು. ಖಾ. ಪಾ. ೩ ನಂ. ೪೨ | |

# ಕೀರ್ದಿಯ ಪಾನು ೯.

೨೦೦ ಸೋಮಪ್ಪಾ ಶಿಂದಗಿ ಇವರ ಖಾತೆ— ಸಪರಿಯವರ ರಾಖಿಲೆಯಿಂದ ಬೆಳಗಾಂವಿ ಅಡತದಾರ ಶಿವಲಿಂಗಪ್ಪಾ ಜೋಳಮಲ್ಲ ಇವರ ಮೇಲೆ, ಮುದತಿ ಹುಂಡಿ ಬರಕೊಟ್ಟಿದ್ದು. ಹುಂಡಾವಳಿಯ ದರ ನೂರಕ್ಕೆ || ರೂ. ಮೇಲು
ಖಾ. ಪಾ. ೬ ನಂ. ೩೮

---

೫ ಹುಂಡಾವಳಿ ಖಾತೆ— ವಿವರ:
೨ ಶಿರಸಪ್ಪಾ ಪ್ರಥಮಶೆಟ್ಟಿ
೨ ಚನ್ನಪ್ಪಾ ಶಿರೂರ
೧ ಸೋಮಪ್ಪಾ ಸಿಂದಗಿ

೫
ಖಾ. ಪಾ. ೬ ನಂ. ೩೯

---

೬೦೫ ತಪಶೀಲು
೬೦೫ ರೋಖು
೦ ಪರಭಾರೆ

೬೦೫

---

೧೭೯೦||೦ ಅಂತು ಹದಿನೇಳು ನೂರಾ ತೊಂಬತ್ತುವರಿ ರೂಪಾಯಿ ದಸ್ತೂರ ವೀರಪ್ಪಾ ಅಂಗಡಿ.

೪೦ ಗೋವಿಂದನಾಯಕ ಕರಿ ಖಾತೆ—ಒಳಗಡೆ ಬಂಗಾರ ತಂದ ಬಾ. ಕೊಟ್ಟದ್ದು.
ಖಾ. ಪಾ. ೪ ನಂ. ೪೩

---

೦||೦ ಸಾದಿಲವಾರ ಖಾತೆ— ಅಂಗಡಿ ದೆಸೆಯಿಂದ ಎಣ್ಣೆ ತರಿಸಿದ್ದು.
ಖಾ. ಪಾ. ೬ ನಂ. ೪೪

---

೨೯೦|| ತಪಶೀಲು
೨೯೦|| ರೋಖು
೦ ಪರಭಾರೆ

೨೯೦||೦
೧೫೦೦ ನಾಳಿನ ಶಿಲಕು

---

೧೭೯೦|| ಅಂತು ಹದಿನೇಳು ನೂರಾ ತೊಂಬತ್ತುವರಿ ರೂಪಾಯಿ ದಸ್ತೂರ ವೀರಪ್ಪಾ ಅಂಗಡಿ.

---

## ೬ನೆಯ ಪ್ರಶ್ನೆ

ಈ ಹೊತ್ತಿನ ದಿವಸ [೧] ಶಿರಸಪ್ಪಾ ಪ್ರಥಮಶೆಟ್ಟಿ ಇವರ ರಾಖಿಲೆಯಿಂದ ಸಖಾರಾಮ ಮಾನಸಾರಾಮ ಶೇಟ ಮುಂಬಯಿ ಇವರ ಕಡೆಗೆ ಬರೆದ ಹುಂಡಿ. [೨] ಚನ್ನಪ್ಪಾ ಶಿರೂರ ಇವರ ರಾಖಿಲೆಯಿಂದ ಪುಣೆಯ ಅಡತದಾರ ರಾಮಾಜಿ ಶೇಟ ಇವರ ಕಡೆಗೆ ಬರೆದ ಹುಂಡಿ. [೩] ಸೋಮಪ್ಪ ಶಿಂದಗಿ ಇವರ ರಾಖಿಲೆಯಿಂದ ಬೆಳಗಾಂವಿ ಅಡತದಾರ ಶಿವಲಿಂಗಪ್ಪಾ ಜೋಳಮಲ್ಲ ಇವರ ಮೇಲೆ ಬರೆದ ಹುಂಡೀ, ಸಕಾರಿಸ್ಸಿ ಖೋಕೆಗಳು ಬಂದವು. [೪] ಗದಗಿನ ಸಾವುಕಾರ ವೀರಪ್ಪಾ ಅಣ್ಣಾ ಕೋಟಿ ಇವರ ಮೇಲಿನ ದರ್ಶನೀ ಹುಂಡಿ ೨೦೦ ರೂ. ರಾಚಪ್ಪಾ ಅಣ್ಣಾ ನೀಲಿ ಇವರಲ್ಲಿ ನೂರಕ್ಕೆ ೧ ರೂ· ಕಡಿಮೆಯಂತೆ ಖರೀದಿ ಮಾಡಿದೆವು. [೫] ಗುರುರಾವ ಗಡಗ ಇವರ ಕಡೆಯಿಂದ ಬರತಕ್ಕ ಬಾಕೀ ಸಂಬಂಧ ೨೫ ರೂಪಾಯಿಗಳು ಬಂದವು. ಇವುಗಳ ಜಮಾಖರ್ಚು ತಯಾರ ಮಾಡಿರಿ. ಹಿಂದಿನ ಶಿಲಕು ೧೫೦೦ ರೂ.

# ಕೀರ್ದಿಯ ಪಾನು ೧೦.

ರೋಜಕೀರ್ದಿ ಮಿತಿ ಮಾರ್ಗಶೀರ್ಷ ಶು. ೨ ರಿಂದ ೧೨ ವರೆಗೆ ಜಮಾಖರ್ಚು (೦) ಶುದ್ಧ ೧೩ ಸೋಮವಾರ ಶಕೆ ೧೮೩೬ ಆನಂದನಾಮ ಸಂ. ತಾ॥ ೧೪—೧೨—೧೯೧೪ ಇಸ್ವಿ

ಜಮಾ ರೂ.

೧೫೦೦ ಹಿಂದಿನ ಶಿಲಕು

ಈ ಹೊತ್ತಿನ ಜಮೆ:

೨೦೦ ರಾಮಜಿ ಶೇಟ ಪುಣೆಯ ಅಂಗಡಿ ಇವರ ಖಾತೆ— ಚನ್ನಪ್ಪಾ ಶಿರೂರ ಇವರ ರಾಖಲೆಯಿಂದ ಬರೆದ ಹುಂಡಿ ಸಕಾರಿಸಿ ಖೋಕೆ ಬಂದ ಕಾರಣ ಹುಂಡೀ ಖಾತೆಗೆ ಖರ್ಚು ಬರೆದು.

ಖಾ. ಪಾ. ೭ ನಂ. ೪೫

೨೦೦ ಶಿವಲಿಂಗಪ್ಪಾ ಜೋಳಮಲ್ಲ ಇವರ ಖಾತೆ— ಸೋಮಪ್ಪ ಶಿಂದಗಿ ಇವರ ರಾಖಲೆಯಿಂದ ಬರೆದ ಹುಂಡೀ ಸಕಾರಿಸಿ ಖೋಕೆ ಬಂದ ಕಾರಣ ಶಿಂದಗಿ ಇವರ ಹೆಸರಿಲೆ ಖರ್ಚು ಬರೆದು.

ಖಾ. ಪಾ. ೭ ನಂ. ೪೬

೨೫ ಗುರುರಾವ ಗದಗ ಇವರ ಖಾತೆ— ಬಾಕಿಯ ಬಾ. ವಸೂಲು ಬಂದದ್ದು.

ಖಾ. ಪಾ. ೪ ನಂ. ೪೭

೨ ಹುಂಡಾವಳೀ ಖಾತೆ— ಹುಂಡೀ ಖರೀದಿ ಮಾಡಿದ ಬಾ. ಬಂದದ್ದು.

ಖಾ. ಪಾ. ೬ ನಂ. ೪೮

೪೨೭ ತಪಶೀಲು
೨೫ ರೋಖು
೪೦೨ ಪರಭಾರೆ
೪೨೭

೧೯೨೭ ಅಂತು ಹತ್ತೊಂಬತ್ತು ನೂರಾ ಇಪ್ಪತ್ತೇಳು ರೂ. ದಸ್ತೂರ ವೀರಪ್ಪ ಅಂಗಡಿ

ಖರ್ಚು ರೂ.

ಈ ಹೊತ್ತಿನ ಖರ್ಚು:

೨೦೦ ಹುಂಡೀ ಖಾತೆ—ರಾಮಜಿ ಶೇಟ ಇವರ ಮೇಲೆ ಚನ್ನಪ್ಪ ಶಿರೂರ ಇವರ ರಾಖಲೆಯಿಂದ ಬರೆದ ಹುಂಡೀ ಸಕಾರಿಸಿ ಖೋಕೆ ಬಂದ ಕಾರಣ ರಾಮಜಿ ಶೇಟರ ಹೆಸರಿಲೆ ಜಮೆ ಹಿಡಿದು.

ಖಾ. ಪಾ. ೬ ನಂ. ೪೯

೨೦೦ ಸೋಮಪ್ಪಾ ಸಿಂದಗಿ ಇವರ ಖಾತೆ— ಸದರಿಯವರ ರಾಖಲೆಯಿಂದ ಚಿಳಗಾಂವಿ ಅಡತದಾರ ಶಿವಲಿಂಗಪ್ಪಾ ಜೋಳಮಲ್ಲ ಇವರ ಮೇಲೆ ಬರೆದ ಹುಂಡಿ ಸಕಾರಿಸಿ ಖೋಕೆ ಬಂದ ಕಾರಣ ಜೋಳಮಲ್ಲ ಇವರ ಹೆಸರಿಲೆ ಜಮಾ.

ಖಾ. ಪಾ. ೬ ನಂ. ೫೦

೨೦೦ ಹುಂಡೀ ಖರೀದಿ ವಿಕರಿ ಖಾತೆ—ಗದಗಿನ ಸಾವುಕಾರ ವೀರಪ್ಪಾ ಅಣ್ಣಾಕೋಟಿ ಇವರ ಮೇಲಿನ ಹುಂಡಿ ರಾಚಪ್ಪಣ್ಣಾ ನೀಲಿ ಇವರಲ್ಲಿ ನೂರಕ್ಕೆ ೧ ರೂ. ಕಡಿಮೆಯಂತೆ ಖರೀದಿ ಹೂಡಿದ್ದು.

೨೦೦ ತಪಶೀಲು
೧೯೮ ರೋಖು
೨ ಹುಂಡಾವಳಿ
೨೦೦

ಖಾ. ಪಾ. ೭ ನಂ, ೫೧

೬೦೦ ತಪಶೀಲು
೧೯೮ ರೋಖು
೪೦೨ ಪರಭಾರೆ
೬೦೦

೧೩೨೭ ನಾಳಿನ ಶಿಲಕು

೧೯೨೭ ಅಂತು ಹತ್ತೊಂಬತ್ತುನೂರಾ ಇಪ್ಪತ್ತೇಳು ರೂ. ದಸ್ತೂರ ವೀರಪ್ಪ ಅಂಗಡಿ

# ಕೀರ್ದಿಯ ಪಾನು ೧೧.

## ೭ನೆಯ ಪ್ರಶ್ನೆ

ಈ ಹೊತ್ತಿನ ದಿವಸ (೧) ಗದಗಿನ ಸಾವಕಾರ ವೀರಪ್ಪಾ ಅಣ್ಣಾ ಕೋಟಿ ಇವರ ಮೇಲಿನ ಹುಂಡಿಯನ್ನು ೨೦೦ ರೂಪಾಯಿಗೆ ದಾನಪ್ಪಾ ಚೆಂಡೀಗೇರಿ ಇವರಿಗೆ ಮಾರಿದೆವು. ಇದರಲ್ಲಿ ನೂರಕ್ಕೆ ೮ ಆಣೆಯಂತೆ ಮುಂಪಾವಳಿ ದೊರೆಯಿತು. (೨) ಸಖಾರಾಮ ಮನಸಾರಾಮ ಶೇಟ ಮುಂಬಯಿ ಇವರು ರಾಮಭಾವು ತಡಸ ಇವರ ರಾಖಲೆಯಿಂದ ಬರೆದ ೨೦೦ ರೂ. ಯ ದರ್ಶನೀ ಹುಂಡಿಯ ಹಣ ಇಲ್ಲಿ ಪರಪ್ಪಾ ಅಂಗಡಿ ಇವರಿಗೆ ಕೊಟ್ಟೆವು. (೩) ನೂರಕ್ಕೆ ೧ ರೂ. ಕಡಿಮೆಯಂತೆ ನಮ್ಮ ರಾಖಲೆಯಿಂದ ಹೀರಾಜೀ ಮೂಲಾಜೀ ಮಾರವಾಡಿ ಇವರು ಮುಂಬಯಿ ಅಡತದಾರ ಪನ್ನಾಜೀ ಮಾರವಾಡಿ ಇವರ ಮೇಲೆ ೨೦೦ ರೂ. ಯ ದರ್ಶನೀ ಹುಂಡಿ ಬರಕೊಟ್ಟದ್ದನ್ನು ಶ್ರೀಶೈಲಪ್ಪಾ ಕಂಕಣಮೇಲಿ ಮುಂಬಯಿ ಇವರ ಕಡೆಗೆ ಕಳುಹಿಸಿದೆವು. ಹೀರಾಜಿಗೆ ರೂ. ಕೊಟ್ಟೆವು. (೪) ೧ ರೂ. ಗಂಗಾಧರ ಶಾಸ್ತ್ರಿಗಳಿಗೆ ದೇಶಾವರೀ ಕೊಟ್ಟೆವು. ಇವುಗಳ ಜಮಾಖರ್ಚು ತಯಾರ ಮಾಡಿರಿ. ಹಿಂದಿನ ಶಿಲಕು ೧೩೨೭ ರೂ.

ರೋಜಕೀರ್ದಿ ಮಿತಿ ಮಾರ್ಗಶೀರ್ಷ ಶುದ್ಧ ೧೪ ಬುಧವಾರ ಶಕೆ ೧೮೩೬ ಆನಂದನಾಮ ಸಂವತ್ಸರ ತಾ॥ ೧೬—೧೨—೧೯೧೪ ಇಸ್ವಿ.

| ಜಮಾ | ರೂ. | ಖರ್ಚು | ರೂ. |
|---|---|---|---|
| ೧೩೨೭ | ಹಿಂದಿನ ಶಿಲಕು. | | |
| | ಈ ಹೊತ್ತಿನ ಜಮೆ: | | ಈ ಹೊತ್ತಿನ ಖರ್ಚು: |
| ೨೦೦ | ಹುಂಡೀ ಖರೀದಿ ವಿಕರಿ ಖಾತೆ—ಗದಗಿನ ಸಾವಕಾರ ವೀರಪ್ಪಾ ಅಣ್ಣಾ ಕೋಟಿ ಇವರ ಮೇಲಿನ ಹುಂಡಿ ಇಂಥಾ ಮಿತಿದು ದಾಸಪ್ಪಾ ಚೆಂಡೀಗೇರಿ ಇವರಿಗೆ ಮಾರಿದ್ದು. ಖಾ. ಪಾ. ೭ ನಂ. ೩೨ | ೨೦೦ | ಸಖಾರಾಮ ಮನಸಾರಾಮ ಶೇಟ ಮುಂಬಯಿ ಇವರ ಖಾತೆ— ರಾಮಭಾವು ತಡಸ ಇವರ ರಾಖಲೆಯಿಂದ ಬರೆದ ಹುಂಡಿ ಮಿತಿ ಇಂಥಾದ್ದು. ಇಲ್ಲಿ ಪರಪ್ಪ ಅಂಗಡಿ ಇವರಿಗೆ ಕೊಟ್ಟದ್ದು. ಖಾ. ಪಾ. ೬ ನಂ. ೫೫ |
| ೧೯೬ | ಹೀರಾಜೀ ಮೂಲಾಜಿ ಮಾರವಾಡಿ ಇವರ ಖಾತೆ—ನಮ್ಮ ರಾಖಲೆಯಿಂದ ಅಡತದಾರ ಪನ್ನಾಜಿ ಮಾರವಾಡಿ ಇವರ ಮೇಲೆ ದರ್ಶನಿ ಹುಂಡೀ ಬರಕೊಟ್ಟ ಪ್ರಕಾರ ಶ್ರೀಶೈಲಪ್ಪ ಕಂಕಣಮೇಲಿ ಇವರ ಹೆಸರಿಲೆ ಖರ್ಚು ಬರೆದು. ಖಾ. ಪಾ. ೭ ನಂ. ೫೩ | ೨೦೦ | ಶ್ರೀಶೈಲಪ್ಪಾ ಕಂಕಣಮೇಲಿ ಮುಂಬಯಿ ಇವರ ಖಾತೆ— ಹೀರಾಜೀ ಮೂಲಾಜಿ ಮಾರವಾಡಿ ಇವರು ನಮ್ಮ ರಾಖಲೆಯಿಂದ ಬರೆದ ಹುಂಡಿ ನಿಮ್ಮ ಕಡೆಗೆ ಕಳುಹಿಸಿದ ಕಾರಣ ಮೂಲಾಜೀಯವರ ಹೆಸರಿಲೆ ಜಮೆ ಹಿಡಿದು. ಖಾ. ಪಾ. ೮ ನಂ. ೫೬ |

# ಕೀರ್ದಿಯ ಪಾನು ೧೨.

| ಜಮಾ | | ಖರ್ಚು | |
|---|---|---|---|
| ೩ | ಹುಂಡಾವಳೀ ಖಾತೆ— ವಿವರ:<br>೧ ಹುಂಡೀ ವಿಕ್ರಿ ಮಾಡಿದ ಬಾಬತ<br>೨ ಪನ್ನಾಜಿ ಮಾರವಾಡಿ ಬಾಬತ<br>—<br>೩<br>ಖಾ. ಪಾ. ೬ ನಂ. ೩೪ | ೧೯೮ | ಹೀರಾಜೀ ಮೂಲಾಜೀ ಮಾರವಾಡಿ ಇವರ ಖಾತೆ— ಹುಂಡೀ ಖರೀದಿ ಮಾಡಿದ ಬಾಬತ ಕೊಟ್ಟದ್ದು.<br>ಖಾ. ಪಾ. ೭ ನಂ. ೩೭ |
| | | ೧ | ಧರ್ಮಾದಾಯ ಖಾತೆ— ಗಂಗಾಧರ ಶಾಸ್ತ್ರಿಗಳಿಗೆ ದೇಶಾವರೀ ಕೊಟ್ಟದ್ದು.<br>ಖಾ. ಪಾ. ೫ ನಂ. ೩೮ |
| ೪೦೧ | ತಪಶೀಲು<br>೨೦೩ ರೋಖು<br>೧೯೮ ಪರಭಾರೆ<br>—<br>೪೦೧ | ೫೯೯ | ತಪಶೀಲು<br>೪೦೧ ರೋಖು<br>೧೯೮ ಪರಭಾರೆ<br>—<br>೫೯೯ |
| | | ೧೧೨೯ | ನಾಳಿನ ಶಿಲಕು |
| ೧೭೨೮ | ಅಂತು ಹದಿನೇಳು ನೂರಾ ಇಪ್ಪತ್ತೆಂಟು ರೂಪಾಯಿ ದಸ್ತೂರ ವೀರಪ್ಪ ಅಂಗಡಿ. | ೧೭೨೮ | ಅಂತು ಹದಿನೇಳು ನೂರಾ ಇಪ್ಪತ್ತೆಂಟು ರೂಪಾಯಿ ದಸ್ತೂರ ವೀರಪ್ಪ ಅಂಗಡಿ. |

---

## ೮ ನೆಯ ಪ್ರಶ್ನೆ

ಈ ಹೊತ್ತಿನ ದಿವಸ (೧) ೧೦೦ ಜೈಮಿನಿ ಪುಸ್ತಕದ ದರ ೧ ರೂ. ಪ್ರಕಾರ ಖರೀದಿ ಮಾಡಿದೆವು. ಇದರಲ್ಲಿ ೧೦೦ಕ್ಕೆ ೫ ರಂತೆ ಕಮಿಶನ ದೊರೆಯಿತು. (೨) ೩೨ ರೂ. ಯ ಟಪಾಲ ಟಿಕೀಟು ಖರೀದಿ ಮಾಡಿದೆವು. ಇದರಲ್ಲಿ ೧ ರೂ. ವರ್ತಾವಳಿ ದೊರೆಯಿತು. (೩) ಒಳಗಡೆ ಹೀರಾಜೀ ಮೂಲಾಜೀ ಮಾರವಾಡಿ ಇವರು ಮುಂಬಯಿ ಅಡತದಾರ ಶ್ರೀಶೈಲಪ್ಪ ಕಂಕಣವೇಲಿ ಇವರ ಮೇಲೆ ಬರಕೊಟ್ಟ ೨೦೦ ರೂ.ಯ ಹುಂಡೀ ಸಕಾರಿಸದೆ ತಿರುಗಿ ಬಂದ ಕಾರಣ ಮೂಲ ಹುಂಡಿಯ ಬಾ. ೨೦೦ ರೂ. ಸಕ್ರಾಯಿ, ನಕ್ರಾಯಿ ೧ ರೂ. ಅಜೂರಿ! ಮಜೂರಿ ೧, ಬಡ್ಡಿ ೧ ರೂ. ಇಲ್ಲಿ ಹೀರಾಜಿಯ ಕಡೆಯಿಂದ ವಸೂಲ ಮಾಡಿದೆವು. (೪) ಮನೆಯ ಧಡೋತಿಯ ದೆಸೆಯಿಂದ ಸೀರಿ ೨ ಚಂದ್ರಕಾಳಿ ದರ ೧೦ ರೂ. ಪ್ರ. ಖರೀದಿ ಮಾಡಿದೆವು. ಇವುಗಳ ಜಮಾಖರ್ಚು ತಯಾರ ಮಾಡಿರಿ. ಹಿಂದಿನ ಶಿಲಕು ೧೧೨೯ ರೂಪಾಯಿ.

ರೋಜಕೀರ್ದಿ ಮಾರ್ಗಶೀರ್ಷ ಬ. ೩೦ ಗುರುವಾರ ಶಕೆ ೧೮೩೬ ಆನಂದನಾಮ ಸಂವತ್ಸರ ತಾ॥ ೧೭—೧೨—೧೯೧೪ ಇಸ್ವಿ.

| ಜಮಾ | ರೂ. | ಖರ್ಚು | ರೂ. |
|---|---|---|---|
| ೧೧೨೯ | ಹಿಂದಿನ ಶಿಲಕು | | ಈ ಹೊತ್ತಿನ ಖರ್ಚು: |
| | ಈ ಹೊತ್ತಿನ ಜಮೆ: | ೧೦೦ | ಪುಸ್ತಕ ಖರೀದಿ ವಿಕರಿ ಖಾತೆ— ಜೈಮಿನಿ ಪುಸ್ತಕ ಪ್ರತಿ ೧೦೦ ದರ ೧ರೂ |
| ೫ | ಕಮಿಶನ ಖಾತೆ— ಜೈಮಿನಿ ಪುಸ್ತಕ | | |

# ಕೀರ್ದಿಯ ಪಾನು ೧೩.

ಖರೀದಿ ಮಾಡಿದ ಬಾ. ಬಂದದ್ದು.
ಖಾ. ಪಾ. ೭ ನಂ. ೫೯

೧ ವರ್ತಾವಳೀ ಖಾತೆ— ಟಪಾಲ ಟಿಕೀಟು ಖರೀದಿ ಮಾಡಿದ ಬಾ. ಬಂದದ್ದು
ಖಾ. ಪಾ. ೮ ನಂ. ೬೦

೨೦೦ ಶ್ರೀಶೈಲಪ್ಪ ಕಂಕಣಮೋಲಿ ಮುಂಬಯಿ ಇವರ ಖಾತೆ— ಹೀರಾಜಿ ಮೂಲಾಜಿ ಮಾರವಾಡಿ ಇವರು ಬರಕೊಟ್ಟ ಹುಂಡಿ ಸಕಾರಿಸದೆ ತಿರಿಗಿ ಬಂದ ಕಾರಣ ಹೀರಾಜಿಯು ಹೆಸರಿಲೆ ಖರ್ಚು ಬರೆದು.
ಖಾ. ಪಾ. ೮ ನಂ. ೬೧

೨ ಸಕ್ರಾಯಿ ನಕ್ರಾಯಿ ಖಾತೆ— ಹೀರಾಜಿಯುವರ ಹುಂಡಿ ತಿರುಗಿ ಬಂದ ಬಾ.
ಖಾ. ಪಾ. ೮ ನಂ. ೬೨

೧ ಬಡ್ಡೀ ಖಾತೆ—ಹೀ ರಾ ಜಿ ಯ ವ ರ ಹುಂಡಿ ತಿರುಗಿ ಬಂದ ಬಾ.
ಖಾ. ಪಾ. ೮ ನಂ. ೬೩

೨೦೩ ಹೀರಾಜಿ ಮೂಲಾಜೀ ಖಾತೆ— ನಮ್ಮ ರಾಖಲೆಯಿಂದ ಬರೆದ ಹುಂಡಿ ಸಕಾರಿಸದೆ, ತಿರುಗಿ ಬಂದ ಕಾರಣ ಸಕ್ರಾಯಿ ನಕ್ರಾಯಿ ಬಡ್ಡಿ ಸಹಿತ ವಸೂಲ ಬಂದದ್ದು.
ಖಾ. ಪಾ. ೭ ನಂ. ೬೪

೪೧೨ ತಪಶೀಲು
೨೦೩ ರೋಖು
೨೦೯ ಪರಭಾರೆ

೪೧೨

೧೫೪೧ ಅಂತು ಪದಿನೈದುನೂರಾ ನಾಲ್ವತ್ತೊಂ

ಪ್ರಕಾರ ಖರೀದಿ ಮಾಡಿದ ವಿವರ—
೯೫ ಪುಸ್ತಕದ ಬಾ.
೫ ಕಮಿಶನ ಬಂದದ್ದು. ಕಮಿಶನ ಖಾತೆಗೆ ಜಮೆ ಹಿಡಿದು.

೧೦೦
ಖಾ. ೮ ನಂ. ೬೫

೩೨ ಟಿಕೀಟ ಖಾತೆ— ವಿವರ:
೩೧ ಟಿಕೀಟಿನ ಬಾಬತು
೧ ವರ್ತಾವಳಿ ಬಂದದ್ದು, ವರ್ತಾ— ವಳೀ ಖಾತೆಗೆ ಜಮಾ ಹಿಡಿದು.
೩೨ ಖಾ. ಪಾ. ೮ ನಂ. ೬೬

೨೦ ಮನೆಖರ್ಚು ಖಾತೆ—ಸೀರಿ ೨ ಚಂದ್ರಕಾಳಿ ದರ ೧೦ ರೂ. ಪ್ರ. ಮನೆಯ ಥಡೋತಿಗೆ ತೆಗೆದುಕೊಂಡದ್ದು.
ಖಾ. ಪಾ. ೫ ನಂ. ೬೭

೨೦೩ ಹೀರಾಜೀ ಮೂಲಾಜೀ ಮಾರವಾಡಿ ಇವರ ಖಾತೆ—ನಮ್ಮ ರಾಖಲೆಯಿಂದ ಪನ್ನಾಜೀ ಮಾರವಾಡಿ ಮುಂಬಯಿ ಇವರ ಮೇಲೆ ಬರೆದ ಹುಂಡಿ ತಿರುಗಿ ಬಂದ ಬಾ.
೨೦೦ ಮೂಲ ಹುಂಡಿಯು
೩ ಸಕ್ರಾಯಿ ನಕ್ರಾಯಿ ಬಡ್ಡಿ ಬಾ.

೨೦೩ ಖಾ. ಪಾ. ೭ ನಂ. ೬೮

೩೫೫ ತಪಶೀಲು
೧೪೬ ರೋಖು
೨೦೯ ಪರಭಾರೆ

೩೫೫
೧೧೮೬ ನಾಳಿನ ಶಿಲಕು

೧೫೪೧ ಅಂತು ಹದಿನೈದುನೂರಾ ನಾಲ್ವತ್ತೊಂ

